ಅವರ ಸ್ನೇಹ ವಲಯ ಹಾಗೂ ಸಾಂಸ್ಕೃತಿಕ ಕಾಳಜಿಗಳು ಒಮ್ಮೊಮ್ಮೆ ದಂಗು ಬಡಿಸುತ್ತವೆ. ಸಾಲಿ ರಾಮಚಂದ್ರರಾಯರು ಹಾಗೂ ಎನ್ಕೆಯವರನ್ನು ಕುರಿತ ಸಂಪಾದಿತ ಕೃತಿಗಳಲ್ಲಿ ಅವರನ್ನು ಇರುವುದಕ್ಕಿಂತ ಎತ್ತರಕ್ಕೊಯ್ಯುವ ಪ್ರಯತ್ನ ಕಂಡು ಬಂದರೂ ಪಟ್ಟಣಶೆಟ್ಟಿಯವರು ಈ ದಿಶೆಯಲ್ಲಿ ಅವಿಸ್ಮರಣೀಯ ಕಾರ್ಯಗೈದಿರುವುದನ್ನು ಯಾರೂ ಮರೆಯುವಂತಿಲ್ಲ.

ಕನ್ನಡ ಮತ್ತು ಹಿಂದೀ ಸಾಹಿತ್ಯವನ್ನು ತುಲನಾತ್ಮಕವಾಗಿ ಅಭ್ಯಾಸ ಮಾಡಿರುವ ಪಟ್ಟಣಶೆಟ್ಟಿಯವರು ತಮ್ಮ ಒಲವಿಗನುಗುಣವಾಗಿ ಮೌಲಿಕವೆನಿಸಿದ್ದನ್ನು ಹಿಂದಿಯಿಂದ ಕನ್ನಡಕ್ಕೆ-ಅದೂ ನಾಟಕ ಕ್ಷೇತ್ರದಲ್ಲಿ - ತಂದು ಕೃತಕೃತ್ಯರಾಗಿದ್ದಾರೆ. ಕಾವ್ಯ, ಕಾದಂಬರಿ, ಜೀವನಚರಿತ್ರೆಗಳೂ ಇದಕ್ಕೆ ಹೊರತಾಗಿಲ್ಲ.

ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ ನಾಟಕ ಅಕಾಡೆಮಿಗಳು ಅವರನ್ನು ಈ ಮೊದಲೇ ಗೌರವಿಸಿರುವುದು ಯೋಗ್ಯವಾಗಿದೆ. ಧಾರವಾಡದಲ್ಲಿ ಪಟ್ಟಣಶೆಟ್ಟಿಯವರಿಗೆ ಉತ್ಸಾಹ, ಸಂಭ್ರಮಗಳಿಂದ ನೆರವೇರಿದ ಅರವತ್ತರ ಅಭಿನಂದನೆಯ ತರುವಾಯ ಮೈಸೂರೂ ಇದಕ್ಕೆ ಮುಂದಾಗಿರುವುದು ಕನ್ನಡಿಗರು ಅಭಿಮಾನಪಡತಕ್ಕ ಸಂಗತಿಯಾಗಿದೆ. ಅವರ ಆತ್ಮೀಯತೆಯೇ ಅಂತಹುದು.

**'ಸಹೃದಯ'**

(ಅಭಿನಂದನ ಗ್ರಂಥ)

೨೦೦೪

# ಕವಿಮಿತ್ರ ಸೋಮಶೇಖರ ಇಮ್ರಾಪುರ

ಬಿಸಿಲ ಹೂಗಂಪನ್ನೆ ಸವಿದ ನನ್ನೀ ಬಾಳು
ಪಸಿದ ಹೊಟ್ಟೆಗೆ ಹಾಲು ಹರಿದಂತಿದೆ
ಮುಸುಕು ಹಾಕಿದ ಮಬ್ಬು ಮಂಜು ನಸುಕಿನಲೆದ್ದು
ಕೊಸರಿ ಕೊಂಡೆತ್ತೆತ್ತೊ ಹೋದಂತಿದೆ

ಎಂದು ಕುತೂಹಲದಿಂದಲೇ ತಮ್ಮ ಕಾವ್ಯ ಜೀವನವನ್ನು 'ಬಿಸಿಲ ಹೂ' (೧೯೬೪)ನಿಂದ ಪ್ರಾರಂಭಿಸಿದ ಶ್ರೀ ಸೋಮಶೇಖರ ಇಮ್ರಾಪುರ 'ಬೆಳದಿಂಗಳು' (೧೯೬೬)ದಲ್ಲಿ ಸುತ್ತಾಡಿ ಬರಬೇಕು, 'ಹುಣ್ಣೀವಿ ಹುಡುಕಬೇಕು' ಎಂಬ ತಮ್ಮ ಪ್ರಯತ್ನವನ್ನು ದಿಟ್ಟತನದಿಂದಲೇ ಮುಂದುವರಿಸಿದರು. 'ಬೆಂಕಿ' (೧೯೭೦)ಯಲ್ಲಿ

ದೀಪಾವಳಿ ಪಾಪ, ಏನು ತಿಳಿಕೊಂಡೀತು
ಹಚ್ಚಿಬಿಡು ದೀಪ

ಎಂಬ ಆಶಾವಾದದ ಬೆಳಕಿನ 'ಸಮಾಧಾನ'ದೊಡನೆ 'ವೇದಾಂತ'ದಂತಹ ಕವಿತೆಯಲ್ಲಿ ಅವರ ಕಾವ್ಯ ವ್ಯಂಜಕ ಸಾಮಗ್ರಿಯೊಂದಿಗೆ ಆರೋಗ್ಯಕರವಾದ ಜೀವನ ದೃಷ್ಟಿಯನ್ನೂ ಪಡೆಯುವಂತಾಯಿತು.

೧೯೭೧ರಲ್ಲಿ ಪ್ರಕಟವಾದ 'ಗಂಡ-ಹೆಂಡಿರ ಜಗಳ ಗಂಧ ತೀಡಿದ್ಹಾಂಗ' ಸಂಗ್ರಹಕ್ಕೆ ಬೆನ್ನುಡಿಯಾಗಿ ನಾನು ಮುಂದಿನ ಮಾತುಗಳನ್ನು ಬರೆದದ್ದುಂಟು.

'ಜಾನಪದ ಭಾಷೆ ಹಾಗೂ ಕಾವ್ಯದ ಮೂಲ ಸತ್ವವನ್ನು ಮೈಗೂಡಿಸಿಕೊಂಡು ತಮ್ಮ ಅಭಿವ್ಯಕ್ತಿಯ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುತ್ತಿರುವ ಈಚಿನ ಕವಿಗಳಲ್ಲಿ ಸೋಮಶೇಖರ ಇಮ್ರಾಪುರ ಅವರ ಸಾಧನೆ ಕಡಿಮೆಯದೇನಲ್ಲ. ನೂತನ ಭಾವಗಳ ಆವಿಷ್ಕಾರಕ್ಕೂ, ರೂಪಕ ನಿರ್ಮಾಣಕ್ಕೂ ಅದನ್ನು ಹೇಗೆ ದುಡಿಸಿಕೊಳ್ಳಬಹುದೆಂಬುದನ್ನು ಅವರ ಈ ಮೊದಲಿನ ಕೆಲವು ಯಶಸ್ವಿ ರಚನೆಗಳು ಎತ್ತಿ ತೋರಿಸುತ್ತವೆ. ಪ್ರಕೃತ ಸಂಗ್ರಹದ ಬಹುಪಾಲು ಕವಿತೆಗಳು ಹಳ್ಳಿಯ ಬಾಳಿನ ಹಲವಾರು ಪ್ರೇಮ ಸನ್ನಿವೇಶಗಳನ್ನು, ಸಂಸಾರಿಕ ಜೀವನದ ಸರಸ ವಿರಸಗಳನ್ನು ಅಲ್ಲಿಯ ಪರಿಸರದೊಂದಿಗೆ ನಿರಾಯಸವಾಗಿ ಮೂಡಿಸುತ್ತವೆ. ಹಳ್ಳಿಯ ಹಾಡಿನ ಗತಿ-ಗತ್ತು, ಗಾಡಿ-ಮೋಡಿ, ಬೆಡಗು-ಬಿನ್ನಾಣಗಳನ್ನು ಸಜೀವವಾಗಿ ಸೆರೆ ಹಿಡಿದು, ದೇಸಿಯ ಸೊಗಡಿನಿಂದ ಈ ಹಾಡುಗಳು ಹೊಮ್ಮಿ ಹೂಂಕರಿಸುತ್ತವೆ. ಆನಂದಕಂದರ 'ನಲ್‌ವಾಡು'ಗಳ ತರುವಾಯ ಆ ಸಂಪ್ರದಾಯಕ್ಕೆ ಇನ್ನಷ್ಟು ಎಣ್ಣೆ ಎರೆದು ಅದನ್ನು ಉಜ್ವಲಗೊಳಿಸಿದ ಶ್ರೇಯಸ್ಸು ನಿರ್ವಿವಾದವಾಗಿ ಇಮ್ರಾಪೂರ ಅವರಿಗೆ ಸಲ್ಲುತ್ತದೆ. ಆ ವರ್ಷದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನದೊಂದಿಗೆ ಹೆಚ್ಚಿನ ಜನಪ್ರಿಯತೆಯನ್ನು ಆ ಸಂಕಲನ ಅವರಿಗೆ ತಂದುಕೊಟ್ಟಿತು. ಮುಂದೆ ನಾಲ್ಕು ವರ್ಷಗಳ

ತರುವಾಯ ಹೊರಬಂದ 'ಬಿರುಗಾಳಿ'ಯಲ್ಲಿ ವಸ್ತು, ಛಂದ ಹಾಗೂ ಅಭಿವ್ಯಕ್ತಿಯಲ್ಲಿ ಸಮಕಾಲೀನ ಸಂವೇದನೆಯೊಂದಿಗೆ ಹೆಚ್ಚಿನ ಹಾಸು-ಬೀಸನ್ನು ಅವರ ಕಾವ್ಯ ಪಡೆದುಕೊಂಡದ್ದಲ್ಲದೆ, ಆಡು ಮಾತಿನ ಲಯವನ್ನು ಅತ್ಯಂತ ಪರಿಣಾಮಕಾರಿಯಾಗಿ ದುಡಿಸಿಕೊಂಡಿರುವುದನ್ನು ಕಾಣಬಹುದು. ಆದರೆ ಅಂದಿನ ಬಂಡಾಯದ ರಭಸದಲ್ಲಿ ಶಕ್ತಿಯುತವಾದ ಈ 'ಬಿರುಗಾಳಿ' ಕೂಡ ವಿಮರ್ಶಕರ ಲಕ್ಷ್ಯಕ್ಕೆ ಬಾರದೆ ಹೋದದ್ದು ನಿಜಕ್ಕೂ ಆಶ್ಚರ್ಯದ ಸಂಗತಿಯಾಗಿದೆ.

ಮುಂದೆ ಜಾನಪದದ ಬೇರೊಂದು ಕ್ಷೇತ್ರಕ್ಕೆ ಕಾಲಿಟ್ಟ ಇಮ್ರಾಪುರ ಅವರಿಗೆ ಅವರ ಕಾವ್ಯದ ಸೃಜನಶೀಲತೆಯೇ ಪ್ರೇರಕ ಶಕ್ತಿಯಾಗಿತ್ತೆಂದರೆ ತಪ್ಪಾಗದು.

ವೃತ್ತಿ ಜೀವನದಿಂದ ನಿವೃತ್ತರಾಗಿರುವ ಇಮ್ರಾಪುರ ಪ್ರವೃತ್ತಿ ಜೀವನದಿಂದ ನಿವೃತ್ತರಾಗದೆ ಕಾವ್ಯರಚನೆಯಲ್ಲಿ ಮತ್ತೆ ತಮ್ಮನ್ನು ತೊಡಗಿಸಿಕೊಂಡು ಇನ್ನಷ್ಟು ಉತ್ತಮ ಕಾವ್ಯವನ್ನು ರಚಿಸುವಂತಾಗಲಿ. 'ಬಲ ಹೂವ ಕೊಡುವ ತಾಯಿ' ಎಂಬ ಅವರ ಒಂದು ಒಳ್ಳೆಯ ಕವಿತೆಯಲ್ಲಿಯ ಕೋರಿಕೆ ಈಡೇರಲಿ ಎಂಬುದೇ ಈ ಸಂದರ್ಭದ ನನ್ನ ಹಾರೈಕೆಯಾಗಿದೆ.

'ಬೇವು-ಬೆಲ್ಲ'
(ಅಭಿನಂದನ ಗ್ರಂಥ)
೨೦೦೧

# ನಮ್ಮ ಗುಂಜೆಟ್ಟಿಯವರು

ಪ್ರೊ. ಬಿ. ವ್ಹಿ. ಗುಂಜೆಟ್ಟಿಯವರು ಈ ವರ್ಷ ನಿವೃತ್ತರಾಗಲಿರುವರಂತೆ ನಿಜವೆ ? ಎಂದು ಸ್ನೇಹಿತರೊಬ್ಬರು ಅನುಮಾನ ಹಾಗೂ ಅಚ್ಚರಿ ಬೆರೆತ ಧ್ವನಿಯಲ್ಲಿ ನನ್ನನ್ನು ಕೇಳಿದರು. ಯಾವುದಾದರೊಂದು ಒಳ್ಳೆಯ ಚಟುವಟಿಕೆಯಲ್ಲಿ ಸದಾ ತಮ್ಮನ್ನು ತೊಡಗಿಸಿಕೊಂಡಿರುವ ಹಸನ್ಮುಖದ ಈ ಕ್ರಿಯಾಶೀಲ ವ್ಯಕ್ತಿಯನ್ನು ಕಂಡವರಿಗೆ ಈ ಸಂದೇಹ ಬರುವುದು ಸಹಜವೇ ಆಗಿದೆ. ಬೆಳಗಾವಿ ಜಿಲ್ಲೆಯಲ್ಲಿ (ಹಂದಿಗುಂದ) ಜನಿಸಿ, ವಿಜಾಪುರ ಜಿಲ್ಲೆ ರಬಕವಿಯಲ್ಲಿ ಮಾಧ್ಯಮಿಕ ಶಿಕ್ಷಣ ಪಡೆದು, ಲಿಂಗರಾಜ ಕಾಲೇಜಿನಿಂದ ಪದವೀಧರರಾಗಿ, ಕರ್ನಾಟಕ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ (ಕನ್ನಡ) ಪದವಿ ಪಡೆದ ಗುಂಜೆಟ್ಟಿಯವರು ಕಳೆದ ೩೪ ವರ್ಷಗಳಿಂದ ಧಾರವಾಡ ಕರ್ನಾಟಕ ಕಾಲೇಜಿನ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ ಇದೀಗ ನಿವೃತ್ತರಾಗಲಿದ್ದಾರೆ. ಅಧ್ಯಾಪಕ ವೃತ್ತಿಯಲ್ಲಿ ನಿಷ್ಠೆಯುಳ್ಳವರಾಗಿ, ಪ್ರವೃತ್ತಿಯಿಂದ ಕನ್ನಡ ನಾಡು-ನುಡಿಯ ಹಿತಚಿಂತಕರಾಗಿ, ಧಾರವಾಡದ ಗುಂಜಾರವದಲ್ಲಿ ಗುಂಜೆಟ್ಟಿ ತನ್ಮಯರಾಗಿ ಬಿಟ್ಟಿದ್ದಾರೆಂದರೆ ತಪ್ಪಾಗದು.

ರಬಕವಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವನ್ನು (೧೯೪೫) ಯಶಸ್ವಿಯಾಗಿ ನೆರವೇರಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ ಶ್ರೀ ಎಸ್. ಎಂ. ಅಂಗಡಿಯವರು ಕನ್ನಡದ ಕಟ್ಟಾ ಅಭಿಮಾನಿಗಳು. ವಚನ ಸಾಹಿತ್ಯವನ್ನು ಇಂಗ್ಲೀಷಿಗೆ ಅನುವಾದಿಸಲು ವಿಶ್ವವಿದ್ಯಾಲಯ ಕೈಕೊಂಡ ಮಹತ್ವದ ಯೋಜನೆಯಲ್ಲಿ ಪ್ರೊ. ಮೆನೆಜಿಸ್ ಅವರ ಜೊತೆಗೆ ಅಂಗಡಿಯವರು ಸಲ್ಲಿಸಿದ ಸೇವೆ ಅವಿಸ್ಮರಣೀಯವಾದುದು. ನನಗೆ ಆತ್ಮೀಯರಾಗಿದ್ದ ಅಂಗಡಿಯವರು ಗುಂಜೆಟ್ಟಿಯವರ ಮಾವಂದಿರು. ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ಪ್ರಸಿದ್ಧ ವಿಮರ್ಶಕರಾಗಿ ಕರ್ನಾಟಕ ಏಕೀಕರಣಕ್ಕಾಗಿ ದುಡಿದ ಹಿರಿಯರಲ್ಲಿ ಒಬ್ಬರೂ ನನ್ನ ವಿದ್ಯಾಗುರುಗಳೂ ಆದ ಪ್ರೊ. ಸ. ಸ. ಮಾಳವಾಡರ ಗರಡಿಯಲ್ಲಿ ಪಳಗಿದ ಪ್ರೊ. ಗುಂಜೆಟ್ಟಿಯವರು ಸಹಜವಾಗಿಯೇ ನನ್ನ ಆತ್ಮೀಯ ಸ್ನೇಹಿತರಲ್ಲಿ ಒಬ್ಬರಾದರು.

ಕಾಲೇಜುಗಳ ಅನೇಕ ಅಧ್ಯಾಪಕರುಗಳಿಗೆ ಕಾಲೇಜಿನ ಕಂಪೌಂಡು ಗೋಡೆಯೇ ಗಡಿರೇಖೆಯಾಗಿ ಬಿಟ್ಟಿರುತ್ತದೆ. ಬೇರೆ ಹವ್ಯಾಸಗಳಲ್ಲಿ ಅವರ ಆಸಕ್ತಿ ತೀರ ಕಡಿಮೆ. (ಅದಕ್ಕೆ ಅವರದೇ ಆದ ಕಾರಣಗಳಿರಬಹುದು). ಆದರೆ ಗುಂಜೆಟ್ಟಿಯಂಥವರು ಸಮಾನ ಮನೋಧರ್ಮದವರೊಡನೆ ಸಾರ್ವಜನಿಕ ಜೀವನದಲ್ಲೂ ಭಾಗವಹಿಸುತ್ತ ಯಾವುದೇ ಹಮ್ಮು-ಬಿಮ್ಮುಗಳಿಲ್ಲದೆ ಕನ್ನಡದ ಕಳಕಳಿಯಲ್ಲಿ ಒಂದಾಗಿ ಬೆಳೆಯುತ್ತ ಸಾಂಸ್ಕೃತಿಕ ಜೀವನದ ಅವಿಭಾಜ್ಯ ಅಂಗವಾಗಿ ಬಿಡುತ್ತಾರೆ.

ಕರ್ನಾಟಕ ಕಾಲೇಜಿನ ಅನೇಕ ಶೈಕ್ಷಣಿಕ ಕಾರ್ಯಗಳ ಜವಾಬುದಾರಿ ಗುಂಜೆಟ್ಟಿಯವರನ್ನು ಅರಸಿಕೊಂಡು ಬಂದದ್ದುಂಟು. ಅಲ್ಲಿಯ ವಿದ್ಯಾರ್ಥಿ ಕಲ್ಯಾಣಾಧಿಕಾರಿಯಾಗಿ. ಜಿಮಖಾನಾ,

ಮಿಶಲನಿ ಚೇರ್ಮನ್‌ರಾಗಿ. ಗ್ರಂಥಾಲಯ ಸಮಿತಿ. ಸ್ಕಾಲರ್‌ಶಿಪ್ ಸಮಿತಿ. ಪ್ರವೇಶ ಸಮಿತಿ ಇತ್ಯಾದಿಗಳ ಸದಸ್ಯರಾಗಿ ಸಕ್ರಿಯ ಸೇವೆ ಸಲ್ಲಿಸಿ ಆಡಳಿತಾಧಿಕಾರಿಗಳ ಮೆಚ್ಚುಗೆ ಗಳಿಸಿದ್ದುಂಟು. ಕರ್ನಾಟಕ ವಿಶ್ವವಿದ್ಯಾಲಯವನ್ನು ಒಳಗೊಂಡು ಬೇರೆ ಬೇರೆ ವಿಶ್ವವಿದ್ಯಾಲಯಗಳ ಪದವಿ ಪರೀಕ್ಷೆಗಳ (ಕನ್ನಡ) ಪರೀಕ್ಷಕರಾಗಿ ಕಾರ್ಯನಿರ್ವಹಿಸಿದ್ದಾರೆ. ಇಂದಿರಾಗಾಂಧಿ ಮುಕ್ತ ವಿಶ್ವವಿದ್ಯಾಲಯ (ಧಾರವಾಡ ಜೆ.ಎಸ್.ಎಸ್.ಶಾಖೆ), ಸಿದ್ಧರಾಮ ಮಾರ್ಗದರ್ಶಿ, ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬಸವರಾಜ ಕಟ್ಟೀಮನಿ ವಿಚಾರವೇದಿಕೆ - ಹೀಗೆ ಹಲವಾರು ಶೈಕ್ಷಣಿಕ ಹಾಗೂ ಸಾಹಿತ್ಯಿಕ ಸಂಘ-ಸಂಸ್ಥೆಗಳಲ್ಲಿ ಅವರು ಸದ್ದಿಲ್ಲದೆ ಸೇವೆ ಸಲ್ಲಿಸುತ್ತಲೇ ಬಂದಿದ್ದಾರೆ.

ಧಾರವಾಡದ, ಅಷ್ಟೇ ಏಕೆ, ಉತ್ತರ ಕರ್ನಾಟಕದ ಅತ್ಯಂತ ಪ್ರತಿಷ್ಠಿತ ಹಿರಿಯ ಸಂಸ್ಥೆಯಾದ ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯಕಾರಿ ಸಮಿತಿಯಾಗಿ ಸದಸ್ಯರಾಗಿ, ಪ್ರಧಾನ ಕಾರ್ಯದರ್ಶಿಗಳಾಗಿ ಕಳೆದ ಇಪ್ಪತ್ತೈದು ವರ್ಷಗಳಿಂದ ಅದರ ಪ್ರತಿಯೊಂದು ಚಟುವಟಿಕೆಯಲ್ಲಿ ತಾದಾತ್ಮ್ಯ ಭಾವದಿಂದ ಕೆಲಸ ಮಾಡುತ್ತ ಅದರ ಏಳಿಗೆಯಲ್ಲಿ ಒಂದಾಗಿದ್ದಾರೆ. ಗುಂಜೆಟ್ಟಿಯವರು ಎಲ್ಲೂ ಸಿಗದಿದ್ದರೆ ವಿದ್ಯಾವರ್ಧಕ ಸಂಘದಲ್ಲಂತೂ ಸಿಕ್ಕೇ ಸಿಗುತ್ತಾರೆಂಬುದನ್ನು ಅವರ ಗೆಳೆಯರೆಲ್ಲರೂ ಬಲ್ಲರು.

ಗೋಕಾಕ ಚಳುವಳಿಗಂತೂ ಕರ್ನಾಟಕ ವಿದ್ಯಾವರ್ಧಕ ಸಂಘವೇ ಸ್ಫೂರ್ತಿಯ ಕೇಂದ್ರವಾಗಿತ್ತಷ್ಟೇ? ಚಳುವಳಿಯ ಪ್ರಮುಖ ಕಾರ್ಯಕರ್ತರಲ್ಲಿ ಒಬ್ಬರಾಗಿ, ಹಗಲಿರುಳೂ ದುಡಿಯುತ್ತ ಕ್ರಿಯಾ ಸಮಿತಿಯ ಕೋಶಾಧ್ಯಕ್ಷರಾಗಿ ಅತ್ಯಂತ ಜವಾಬ್ದಾರಿಯಿಂದ ಕಾರ್ಯ ನಿರ್ವಹಿಸಿದ್ದನ್ನು ನಾನು ಸಮೀಪದಿಂದ ಬಲ್ಲೆ. ಆ ಸಂದರ್ಭದಲ್ಲಿ ಹಿಂಡಲಗಿ ಜೇಲನ್ನೂ ಅವರು ಕಂಡುಬಂದರು. ಹಾಗೆ ನೋಡಿದರೆ ಅವರದು ಸೌಮ್ಯ ಸ್ವಭಾವ. ಆದರೆ ಅನ್ಯಾಯವನ್ನು ಅವರು ಎಂದಿಗೂ ಸಹಿಸರು. ಅಂಥ ಸಂದರ್ಭದಲ್ಲಿ ಅವರು ನಿಷ್ಠುರವಾಗಿಯೇ ವರ್ತಿಸುತ್ತಾರೆ. ರಾಯಬಾಗ ತಾಲೂಕಾ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನದ (ಹಂದಿಗುಂದದಲ್ಲಿ) ಅಧ್ಯಕ್ಷ ಪದವಿಯನ್ನಿತ್ತು ಗೌರವಿಸಿದ್ದು, ಅವರ ಜನಪ್ರಿಯತೆಗೂ ಕಾರ್ಯಕ್ಷಮತೆಗೂ ಸಾಕ್ಷಿಯಾಗಿದೆ.

ಆಗಾಗ ಉತ್ತರ ಕರ್ನಾಟಕದ ಅನೇಕ ಊರುಗಳಿಗೆ ಹೋಗಿ, ಭಾಷಣ ಮಾಡಿ, ಕನ್ನಡದ ಜಾಗೃತಿಗೆ ಅವರು ನೆರವಾಗಿದ್ದಾರೆ. ಮಹತ್ವದ ಸಭೆ-ಸಮ್ಮೇಳನಗಳ ಸಂಘಟನೆಯಲ್ಲಿ ಗುಂಜೆಟ್ಟಿಯವರ ಪಾಲು ಯಾವಾಗಲೂ ಇದ್ದೇ ಇರುತ್ತದೆ. ನಾಲ್ಕೈದು ಸ್ವತಂತ್ರ ಕೃತಿಗಳ ಜೊತೆಗೆ ಐದಾರು ಗ್ರಂಥಗಳನ್ನು ಅವರು ಸಂಪಾದಿಸಿ ಕೊಟ್ಟಿದ್ದಾರೆ. ಸ್ಮರಣ ಸಂಚಿಕೆ, ಅಭಿನಂದನ ಗ್ರಂಥಗಳಿಗೆ ಸಂದರ್ಭೋಚಿತ ಲೇಖನಗಳನ್ನು ಬರೆದಿದ್ದಾರೆ. ಆಕಾಶವಾಣಿಯ ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ. ಅವರ ಕವಿತೆಗಳ ಸಂಗ್ರಹವೊಂದು ಪ್ರಕಟನೆಗೆ ಕಾದಿದೆ.

ಕನ್ನಡದ ಹಿರಿಯ ಚೇತನ ಶ್ರೀ ಮಾಸ್ತಿಯವರು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದಾಗ ಕನ್ನಡದ ಕೆಲಸವನ್ನು ಕುರಿತು ಮಾತನಾಡುತ್ತ, 'ನನಗೆ ಒಂದು ನೂರು ಜನ ಒಳ್ಳೆ ಕಾರ್ಯಕರ್ತರನ್ನು ಕೊಡಿ : ಕನ್ನಡದಲ್ಲಿ ಒಂದು ಕ್ರಾಂತಿಯನ್ನೇ ಮಾಡಿ ತೋರಿಸುತ್ತೇನೆ' ಎಂದು ಹೇಳಿದ್ದರಂತೆ. ಅವರು ಬಯಸಿದ ಅಂಥ ಕಾರ್ಯಕರ್ತರಲ್ಲಿ ಪ್ರೊ. ಗುಂಜೆಟ್ಟಿ

ಅಗ್ರಪಂಕ್ತಿಯಲ್ಲಿ ನಿಲ್ಲುವಂಥವರು. ರಾಘವಾಂಕ ಕವಿ ತನ್ನ 'ಹರಿಶ್ಚಂದ್ರ ಕಾವ್ಯ'ವನ್ನು ಜನ ಬದುಕಲೆಂದು 'ಕಾವ್ಯ ಮುಖದಿಂ ಪೇಳ್ದೆನನಪೇಕ್ಷೆಯಿಂದ' ಎಂದಿದ್ದಾನೆ. ಇಂದು ನಮ್ಮ ಸಾಮಾಜಿಕ ಹಾಗೂ ಸಾಂಸ್ಕೃತಿಕ (ರಾಜಕೀಯ ಬಿಟ್ಟುಬಿಡೋಣ) ಕ್ಷೇತ್ರದಲ್ಲಿ ಹಾಗೆ ನಿರಪೇಕ್ಷೆಯಿಂದ ಕೆಲಸ ಮಾಡುವವರ ಸಂಖ್ಯೆ ತೀರ, ತೀರ ವಿರಳವಾಗುತ್ತಿದೆ. ಅಂಥ ವಿರಳ ಹಾಗೂ ಸರಳ ವ್ಯಕ್ತಿಗಳಲ್ಲಿ ಗುಂಜೆಟ್ಟಿಯಂಥವರು ಆಶಾಕಿರಣವಾಗಿ ಕಂಡುಬರುತ್ತಾರೆ. ಅಂಥ ಸಜ್ಜನರನ್ನು ಗೌರವ ಗ್ರಂಥದೊಂದಿಗೆ ಸನ್ಮಾನಿಸುವ ಸ್ತುತ್ಯ ಕಾರ್ಯದಲ್ಲಿ ತೊಡಗಿರುವ ಮಿತ್ರ ಬಳಗಕ್ಕೆ ನನ್ನ ಶುಭಾಶಂಸೆಗಳು ಹಾಗೂ ಹಾರ್ದಿಕ ಅಭಿನಂದನೆಗಳು.

'ಗುಂಜಾರವ'

(ಅಭಿನಂದನ ಗ್ರಂಥ)

೨೦೦೦

# ಎಲ್ಲರೊಳಗೊಂದಾದ ಎಲ್. ಎಸ್. ಶಾಸ್ತ್ರಿ

ಬೆಳಗಾವಿಯ ಪತ್ರಿಕಾ ಪ್ರಪಂಚ ಹಾಗೂ ಸಾಹಿತ್ಯಿಕ ಸಾಂಸ್ಕೃತಿಕ ಸಭೆ ಸಮಾರಂಭಗಳಿಗೆ ಸಂಬಂಧಪಟ್ಟಂತೆ ಯಾವುದೇ ಬಗೆಯ ಕಾರ್ಯಕ್ರಮದಲ್ಲಿ ಒಂದಿಲ್ಲ ಒಂದು ರೀತಿಯಿಂದ ತಮ್ಮನ್ನು ತೊಡಗಿಸಿಕೊಂಡು, ಚಟುವಟಿಕೆಯಿಂದ ಓಡಾಡುವ, ಮುಗ್ಧ ಮನಸ್ಸಿನ ತೆಳ್ಳನೆಯ ಬೆಳ್ಳನೆಯ ವ್ಯಕ್ತಿಯೊಬ್ಬರು ಕಂಡುಬಂದರೆ, ಅವರೇ ಎಲ್. ಎಸ್. ಶಾಸ್ತ್ರಿಗಳೆಂದು ಕೂಡಲೇ ಗುರುತಿಸಬಹುದು.

ಶಾಸ್ತ್ರಿಗಳು ತಮ್ಮ ಮಿತ್ರರಾದ ಬಾಳೇಶ ಲಕ್ಷೆಟ್ಟಿಯವರೊಂದಿಗೆ ಬೇರೆ ಬೇರೆ ಸಂದರ್ಭಗಳಲ್ಲಿ ನನ್ನನ್ನು ಅನೇಕ ಸಲ ಭೆಟ್ಟಿಯಾಗಿದ್ದುಂಟು. ಅವುಗಳಲ್ಲಿ ಯಾವುದೂ ವೈಯಕ್ತಿಕವಾಗಿರದೆ ಸಾರ್ವಜನಿಕ ಹಿತಾಸಕ್ತಿಯೇ ಪ್ರಮುಖವಾಗಿರುತ್ತಿದ್ದುದನ್ನು ನಾನು ಕಂಡುಕೊಂಡಿದ್ದೆ. ಉಪನ್ಯಾಸ, ಕವಿಗೋಷ್ಠಿ, ಪುಸ್ತಕ ಬಿಡುಗಡೆ, ಸನ್ಮಾನ-ಹೀಗೆ ಅವರು ಸಂಘಟಿಸಿದ ಹಲವಾರು ಕಾರ್ಯಕ್ರಮಗಳಲ್ಲಿ ನಾನು ಭಾಗವಹಿಸಿದಾಗೆಲ್ಲ ಅವರ ಪರಹಿತಾರ್ಥ ಚಿಂತನೆ ಹಾಗೂ ಸಂಘಟನೆ ಸಾಮರ್ಥ್ಯ ನನ್ನನ್ನು ಚಕಿತಗೊಳಿಸಿದೆ. ವೈಯಕ್ತಿವಾಗಿ ಯಾವುದೇ ಸ್ಥಾನಮಾನಕ್ಕೆ ಹಾತೊರೆಯದೆ ಉಳಿದವರ ಉತ್ಕರ್ಷದಲ್ಲಿಯೇ ತಮ್ಮನ್ನು ತಾವು ಕಂಡುಕೊಳ್ಳುವ ಅಪರೂಪದ ಸ್ವಭಾವ ಅವರದಾಗಿದೆ. ಪ್ರಾರಂಭದಿಂದಲೂ ಪತ್ರಿಕಾವ್ಯವಸಾಯವನ್ನೇ ತಮ್ಮ ವೃತ್ತಿಯಾಗಿ ಮಾಡಿಕೊಂಡಿರುವ ಅವರು ಉತ್ತರ ಕನ್ನಡ ಜಿಲ್ಲೆಯಿಂದ ಬೆಳಗಾವಿಗೆ ಬಂದು ನೆಲೆಸಿದ್ದು ಒಂದು ಯೋಗಾಯೋಗ. ಸಾಮಾನ್ಯವಾಗಿ ಬೆಳಗಾವಿಯ ಎಲ್ಲ ದಿನಪತ್ರಿಕೆಗಳಲ್ಲಿಯೂ ಉಪಸಂಪಾದಕರಾಗಿ ಕೆಲಸ ಮಾಡಿದ ಅವರ ಅನುಭವ ವಿಶಿಷ್ಟವಾಗಿರಲಿಕ್ಕೆ ಸಾಧ್ಯ. ನಾನು ಆಗಾಗ ದೀಪಾವಳಿ ಸಂಚಿಕೆ ಅಥವಾ ಯಾವುದೇ ವಿಶೇಷ ಸಂಚಿಕೆಗೆ ಕವಿತೆ ಅಥವಾ ಲೇಖನವನ್ನು ಕೋರಿ ನನಗೆ ಪತ್ರ ಬರೆದಾಗೆಲ್ಲ ಅವರ ವಿಳಾಸಗಳು ಬದಲಾಗುತ್ತಲೇ ಬಂದಿರುವುದನ್ನು ನಾನು ಗಮನಿಸಿದ್ದೇನೆ. ಕೆಲಕಾಲ ಸ್ವಂತ ಪತ್ರಿಕೆಯ ಪ್ರಕಟನೆಯಲ್ಲಿ ಅವರು ಉತ್ಸಾಹ ತೋರಿಸಿದ್ದೂ ಉಂಟು. ಹೀಗೆ ಪತ್ರಿಕಾ ಕ್ಷೇತ್ರದಲ್ಲಿ ಎಲ್ಲ ಋತುಮಾನಗಳಲ್ಲಿಯೂ ಬೆಳೆ ತೆಗೆಯಲು ದುಡಿಯುತ್ತ ಬಂದ ಶಾಸ್ತ್ರಿಯವರನ್ನು ರಾಜ್ಯ ಪತ್ರಿಕಾ ಅಕಾಡೆಮಿ ಗುರುತಿಸಿ ಪ್ರಶಸ್ತಿ ಪ್ರದಾನ ಮಾಡಿದ್ದು ಸಂತೋಷ ಪಡತಕ್ಕ ಸಂಗತಿಯೇ ಸರಿ.

ಕವಿಯಾಗಿ, ಯಕ್ಷಗಾನ ಕಲಾತಜ್ಞರಾಗಿ, ನಿರ್ಭೀತ ಪತ್ರಿಕಾಕರ್ತರಾಗಿ, ಪ್ರಖ್ಯಾತರಾಗಿದ್ದ ಜಿ. ಆರ್. ಪಾಂಡೇಶ್ವರ ಅವರ ಸ್ಮರಣಾರ್ಥ ಪಾಂಡೇಶ್ವರ ಪ್ರತಿಷ್ಠಾನ ಕಳೆದ ವರ್ಷ ಧಾರವಾಡದಲ್ಲಿ ಸ್ಥಾಪನೆಗೊಂಡಿತು. ಅದರ ಉದ್ಘಾಟನ ಸಮಾರಂಭದ ಸಂದರ್ಭದಲ್ಲಿ ಅರ್ಹ ಪತ್ರಕರ್ತರಿಗೆ ಕೊಡಲು ಯೋಜಿಸಿದ ಪ್ರತಿಷ್ಠಾನದ ಪ್ರಶಸ್ತಿಯನ್ನು ಪ್ರಥಮವಾಗಿ ಸ್ವೀಕರಿಸಿದವರು ಎಲ್. ಎಸ್. ಶಾಸ್ತ್ರಿಯವರು. ಶಾಸ್ತ್ರಿಯವರಿಗೆ ಇದು ಅನಿರೀಕ್ಷಿತವಾಗಿದ್ದರೂ ಹೊನ್ನಾವರದಲ್ಲಿ ಪಾಂಡೇಶ್ವರರಂಥ ಹಿರಿಯ ಪತ್ರಕರ್ತರ ಪ್ರತ್ಯಕ್ಷ ಪ್ರಭಾವಕ್ಕೆ ಅವರು ಒಳಗಾಗಿದ್ದ ಒಳ್ಳೆಯ ಅಂಶವನ್ನು ಸಮಾರಂಭದ ಉದ್ಘಾಟನೆಯ ಭಾಷಣದಲ್ಲಿ ನಾನು ಎತ್ತಿ ಹೇಳಿದಾಗ ಶಾಸ್ತ್ರಿಯವರು

ಅದನ್ನು ಕೃತಜ್ಞತೆಯಿಂದ ಒಪ್ಪಿಕೊಂಡುದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

ಶಾಸ್ತ್ರಿಯವರು ಅರವತ್ತು ವಸಂತಗಳನ್ನು ಕಾಣುತ್ತಿರುವ ಈ ಸಂದರ್ಭವನ್ನು ಸದುಪಯೋಗಪಡಿಸಿಕೊಂಡು ಬೆಳಗಾವಿಯಲ್ಲಿ ಅವರಿಗೆ ಸಾರ್ವಜನಿಕ ಸನ್ಮಾನ ಹಾಗೂ ಗೌರವ ಗ್ರಂಥ ಪ್ರಕಟನೆಯ ಕಾರ್ಯವನ್ನು ಹಮ್ಮಿಕೊಂಡಿರುವ ಶ್ರೀ ಎಲ್. ಎಸ್. ಶಾಸ್ತ್ರಿ ಷಷ್ಟ್ಯಬ್ದಿ ಸನ್ಮಾನ ಸಮಿತಿಯನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ. ಈ ಸಂದರ್ಭದಲ್ಲಿ ಬೆಳಗಾವಿ ನರಗಾಭಿವೃದ್ಧಿ ಪ್ರಾಧಿಕಾರ ಇನ್ನುಳಿದ ಪತ್ರಿಕಾಕರ್ತರಂತೆ ಶ್ರೀ ಶಾಸ್ತ್ರಿಯವರಿಗೂ ನಿವೇಶನದ ಸೌಲಭ್ಯವನ್ನು ಒದಗಿಸಿ ತನ್ನ ಪಾಲಿನ ಕರ್ತವ್ಯವನ್ನು ನೆರವೇರಿಸುವದೆಂದು ಆಶಿಸುತ್ತೇನೆ. ರಾಜ್ಯದ ಸಚಿವರು ಶಾಸಕರಾದಿಯಾಗಿ ಅನೇಕ ಗಣ್ಯ ವ್ಯಕ್ತಿಗಳನ್ನೊಳಗೊಂಡಿರುವ ಸನ್ಮಾನ ಸಮಿತಿಯು ಇದೇ ಕಾಲಕ್ಕೆ ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸಿ ಶಾಸ್ತ್ರಿಯವರ ಹೆಸರಿನಲ್ಲಿ ದತ್ತಿ ಬಹುಮಾನದ ವ್ಯವಸ್ಥೆಯನ್ನು ಕೈಗೊಂಡಲ್ಲಿ ಬೆಳಗಾವಿಯ ಸತ್ಸಂಪ್ರದಾಯವನ್ನು ಮುಂದುವರಿಸಿದ ಶ್ರೇಯಸ್ಸಿಗೆ ಅದು ಖಂಡಿತವಾಗಿಯೂ ಪಾತ್ರವಾಗಬಲ್ಲದು.

ಸ್ವತಃ ಒಳ್ಳೆಯ ಲೇಖಕರಾಗಿದ್ದು ಸ್ವಇಚ್ಛೆಯಿಂದ ಅಥವಾ ಪ್ರಸಂಗಾನುಸಾರ ಪತ್ರಿಕಾಕರ್ತರಾಗಿ ತಮ್ಮತನವನ್ನು ಮೆರೆದ ಪ್ರತಿಭಾವಂತರು ಬೆಳಗಾವಿಯಲ್ಲಿ ಹಲವರಿದ್ದಾರೆ. ಗಡಿ-ಬಿಡಿ ಗೊಂದಲಾಸುರರಿಗೆ ಬುದ್ಧಿಗಲಿಸಿ, ಪರಸ್ಪರ ತಿಳಿವಳಿಕೆಯ ಬಾಂಧವ್ಯಕ್ಕೆ ನೀರೆರೆಯುತ್ತ, ನಗರದ ಸಾಂಸ್ಕೃತಿಕ ಜೀವನಕ್ಕೆ ಹೊಸ ಜೀವಕಳೆಯನ್ನು ತಂದುಕೊಡುತ್ತಿರುವ ವೃತ್ತಿಬಾಂಧವರ ಪಂಕ್ತಿಯಲ್ಲಿ ಎಲ್. ಎಸ್. ಶಾಸ್ತ್ರಿಗಳು ಸ್ಥಾನ ಪಡೆದಿರುವುದು ನಿಜಕ್ಕೂ ಸಂತೋಷದ ಸಂಗತಿ. ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಸೇವೆಗೆ ಅಣಿಗೊಳ್ಳುವಂತೆ ಭಗವಂತನು ಶಾಸ್ತ್ರಿಯವರಿಗೆ ಆಯುರಾರೋಗ್ಯವನ್ನು ಒದಗಿಸಲೆಂದು ಹಾರೈಸುತ್ತೇನೆ.

'ಸವ್ಯಸಾಚಿ'

(ಗೌರವ ಗ್ರಂಥ)

೨೦೦೭

# ಉತ್ಸಾಹಕ್ಕೊಂದು ಉಡುಗೊರೆ

ಶ್ರೀ ಬಾಳೇಶ ಲಕ್ಷೆಟ್ಟಿ ಆತ್ಮಾವಲೋಕನ ಮಾಡಿಕೊಳ್ಳುತ್ತ ಒಂದೆಡೆ ಹೇಳಿದ್ದಾರೆ : "ಜನ ನನ್ನನ್ನು ನೋಡಿ ನಕ್ಕಿದೆ; ಇಂದಿಗೂ ನಗುತ್ತಿದೆ. ನನ್ನನ್ನು ನೋಡಿ ವ್ಯಂಗ್ಯವಾಗಿ ನಕ್ಕಾಗಲೇ ಅವರ ಮನಸ್ಸಿಗೆ ಸಮಾಧಾನ. ಅವರ ನಗುವನ್ನು ಕುರಿತು ಆಲೋಚಿಸಿದಾಗೆಲ್ಲ ಆ ನಗುವಿಗೂ ಒಂದು ಅರ್ಥವಿದ್ದಿರಬೇಕೆಂದು ಅನಿಸುತ್ತದೆ."

ಲಕ್ಷೆಟ್ಟಿಯವರನ್ನು ಲಿಂಗರಾಜ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಿನಿಂದಲೂ ನಾನು ಬಲ್ಲೆ. ಆಗಲೇ ಅವರಿಗೆ ಸಾಹಿತ್ಯದ ಹುಚ್ಚು. ಸಾಹಿತಿಗಳನ್ನು ಪರಿಚಯ ಮಾಡಿಕೊಳ್ಳುವುದು; ಅವರೊಡನೆ ಪತ್ರವ್ಯವಹಾರ ಮಾಡುವುದು; ಸಾಹಿತ್ಯಿಕ ಚಟುವಟಿಕೆಗಳಲ್ಲಿ ಸಭೆ ಸಮಾರಂಭಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದು; ಭೆಟ್ಟಿಯಾದಾಗೆಲ್ಲ ತಮಗೆ ಪ್ರಿಯವಾದ ವಿಷಯಗಳ ಬಗ್ಗೆ ಚರ್ಚಿಸಿ ಸಂದೇಹ ನಿವಾರಣೆ ಮಾಡಿಕೊಳ್ಳುವುದು; ಲೇಖಕರ ಬಳಗವನ್ನು ಕಟ್ಟುವುದು; ಹಿರಿಯರನ್ನು ಓಲೈಸುವುದು, ಕಿರಿಯನ್ನು ಪ್ರೋತ್ಸಾಹಿಸುವುದು; ತಮಗನಿಸಿದ್ದನ್ನು ಬರವಣಿಗೆಯಲ್ಲಿಳಿಸಲು ಪ್ರಯತ್ನಿಸುವುದು; ಕಳೆದ ಮೂರು ದಶಕಗಳಿಗೂ ಮಿಕ್ಕಿ ಅವರು ತಮ್ಮ ಬದುಕನ್ನು ಬರವಣಿಗೆಯನ್ನು ತಿದ್ದಿ ಹದಗೊಳಿಸಿಕೊಳ್ಳುತ್ತ ಬಂದಿದ್ದಾರೆ. ಮೊದಮೊದಲು ಕೆಲವರಿಗೆ ಇವರ ಹವ್ಯಾಸಗಳು ವಿಚಿತ್ರವಾಗಿ ಕಂಡಿರಬಹುದು. ಕೆಲವರು ಸೋಮಾರಿಗಳು ಇವರ ಉಕ್ಕಿ ಹರಿಯುವ ಉತ್ಸಾಹವನ್ನು ಕಂಡು ನಕ್ಕಿರಬಹುದು, ಆದರೆ ನನಗನಿಸುವಂತೆ ಖಂಡಿತ ಅಂಥವರು ವ್ಯಂಗ್ಯವಾಗಿ ನಕ್ಕಿರಲಾರರು. ಯಾಕೆಂದರೆ ಸ್ವತಃ ಲಕ್ಷೆಟ್ಟಿಯವರೇ ನಕ್ಕವರ ಜೊತೆಗೆ ತಾವೂ ನಗಬಲ್ಲ ಸ್ವಚ್ಛ ಸ್ವಭಾವದವರು. ಅವರೇ ಹೇಳಿರುವಂತೆ ಆ ನಗುವಿನಲ್ಲಿಯೂ ಒಂದು ಅರ್ಥವನ್ನು ಅವರು ಕಂಡುಕೊಂಡಿದ್ದಾರೆ. ಅದೀಗ ಮಾಗಿದ ಬೆಳವಣಿಗೆಯ ಲಕ್ಷಣ. ಬೆಳಗಾವಿ ಜಿಲ್ಲೆಯ ಲೇಖಕರಲ್ಲಿ ಸ್ವಂತಸಾಹಸದಿಂದ, ಸ್ವಯಂಪ್ರಕಾಶನಗಳಿಂದ ಒಡೆದುಕಾಣುವ ವ್ಯಕ್ತಿಗಳಲ್ಲಿ ಅವರು ಒಬ್ಬರೆನಿಸಿದ್ದಾರೆ. ಅದೇ ಕಾರಣದಿಂದಾಗಿಯೇ ಆ ಜಿಲ್ಲೆಯ ಹಿರಿಯ ಸಾಹಿತಿಗಳಾದ ಕೃಷ್ಣಮೂರ್ತಿ ಪುರಾಣಿಕ ಹಾಗೂ ಬಸವರಾಜ ಕಟ್ಟೀಮನಿಯಂಥವರು ಅವರನ್ನು ಪ್ರೀತಿಯಿಂದ ಕಂಡು ಬೆನ್ನು ತಟ್ಟಿದ್ದಾರೆ.

ಲಕ್ಷೆಟ್ಟಿ ತಮ್ಮ ಬರವಣಿಗೆಯ 'ಭಾಗ್ಯೋದಯ' (೧೯೫೭)ವನ್ನು ಕವಿತೆಯಿಂದಲೇ ಕಂಡುಕೊಂಡವರಾದರೂ ಸಣ್ಣಕಥೆ, ಪತ್ರಸಾಹಿತ್ಯ, ವ್ಯಕ್ತಿಚಿತ್ರ, ಜೀವನಚರಿತ್ರೆ, ಮಕ್ಕಳ ಸಾಹಿತ್ಯ- ಹೀಗೆ ತಮ್ಮ ಅಳವಿಗೆ ಸಿಗಬಹುದಾದ ಸಾಹಿತ್ಯ ಪ್ರಕಾರಗಳಲ್ಲಿ ಎಡೆಬಿಡದೆ ಕೃಷಿ ಮಾಡುತ್ತ ೨೫ಕ್ಕೂ ಮಿಕ್ಕಿ ಕೃತಿರಚನೆ ಮಾಡಿದ್ದಾರೆ. ಆದರೂ ಕವನಸಂಗ್ರಹಗಳಿಗೇ ಅದರಲ್ಲಿ ಹೆಚ್ಚಿನ ಪಾಲು ಸಲ್ಲುತ್ತದೆ. ಭಾವುಕತೆಯಿಂದ ವೈಚಾರಿಕತೆಯತ್ತ ಅವರು ಹೆಜ್ಜೆ ಹಾಕುತ್ತಿರುವುದನ್ನು ಅಲ್ಲಿ ಗುರುತಿಸಬಹುದು. ಈಚೆಗೆ ಒಂದು ಕಾದಂಬರಿಯನ್ನು ಅವರು ಬರೆದಿದ್ದಾರೆ, ಒಬ್ಬ ಆದರ್ಶ ಶಿಕ್ಷಕರ ಜೀವನದ ಸಂಕಷ್ಟಗಳನ್ನು ಇಂದಿನ ರಾಜಕೀಯ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಚಿತ್ರಿಸಲು

ಪ್ರಯತ್ನಿಸಿದ್ದಾರೆ. ವ್ಯಕ್ತಿಚಿತ್ರ ಹಾಗೂ ಜೀವನ ಚರಿತ್ರೆ ಅವರಿಗೆ ಹೆಚ್ಚು ಒಗ್ಗಿದ ಸಾಹಿತ್ಯಪ್ರಕಾರವಾಗಿ ಕಾಣುತ್ತದೆ. 'ಸಾಹಿತ್ಯ ಯಾತ್ರಿಕರು' ಕೃತಿಯಿಂದ ಪ್ರಾರಂಭಿಸಿದ ಅವರು 'ಡಾ. ಶ್ಯಾಮಪ್ರಸಾದ ಮುಖರ್ಜಿ' ಕೃತಿಯಲ್ಲಿ ಹೆಚ್ಚಿನ ಸಫಲತೆಯನ್ನು ಪಡೆದಿದ್ದಾರೆ.

ಅವರೀಗ ಬೆಳಗಾವಿಯಲ್ಲಿ ತಮ್ಮ ಅಧ್ಯಾಪಕ ವೃತ್ತಿಯನ್ನು ಮುಂದುವರಿಸಿರುವುದು ಅಲ್ಲಿಯ ಕನ್ನಡದ ಚಟುವಟಿಕೆಗಳಿಗೆ, ಸಾಹಿತ್ಯಿಕ ಕಾರ್ಯಕಲಾಪಗಳಿಗೆ ಹೆಚ್ಚಿನ ಬಲವನ್ನು ತಂದುಕೊಡುವ ಸೂಚನೆಗಳನ್ನು ನೀಡಿದೆ. ಸ್ಥಳೀಯ ಸಂಘ ಸಂಸ್ಥೆಗಳ ಜೊತೆ ಮಧುರ ಬಾಂಧವ್ಯವನ್ನು ಇಟ್ಟುಕೊಳ್ಳುತ್ತಲೇ ತಮ್ಮದೇ ಆದ ಒಂದು ಬಳಗವನ್ನು ಸ್ಥಾಪಿಸುವ ಉತ್ಸಾಹದಲ್ಲಿ ಅವರು ಎಂದೂ ಹಿಂದೆ ಬೀಳಲಾರರು. ಅದರಿಂದ ಪರಸ್ಪರ ಮೈತ್ರಿಗೆ ಬಾಧೆ ಬರದಂತೆ ನೋಡಿಕೊಳ್ಳುವ ಕೌಶಲ ಅವರಿಗಿದೆ. ಬೆಳಗಾವಿಯಲ್ಲಿ ಕೆಲದಿನಗಳ ಹಿಂದೆ ಅವರು ಹೊಸದಾಗಿ ಪ್ರಾರಂಭಿಸಿದ 'ಸಾಹಿತ್ಯ ಕಲಾವೇದಿಕೆ'ಯ ಉದ್ಘಾಟನೆ ಮಾಡುವ ಅವಕಾಶ ನನಗೆ ಒದಗಿದ್ದಿತು. ಲಕ್ಷೆಟ್ಟಿಯವರ ಸ್ನೇಹಿತರ ಬಳಗ ಎಷ್ಟು ದೊಡ್ಡದು, ಅವರಿಟ್ಟುಕೊಂಡು ಬಂದ ಮಾನವೀಯ ಸಂಬಂಧ ಎಂಥದು ಎನ್ನುವುದಕ್ಕೆ ಅಂದಿನ ಸಭೆ ಒಂದು ಒಳ್ಳೆಯ ನಿದರ್ಶನವಾಗಿ ನನಗೆ ತೋರಿತು. ಆ ಮಾತನ್ನು ಅಂದಿನ ಸಭಿಕರಲ್ಲಿ ಹಂಚಿಕೊಂಡು ನಾನು ಸಂತೋಷಪಟ್ಟಿದ್ದುಂಟು.

"ಜೀವನದಲ್ಲಿ ಮಾನವೀಯ ಸಂಸ್ಕೃತಿಗೆ ಪ್ರಥಮ ಸ್ಥಾನವಿದೆ. ಅಂತಹ ಸಂಸ್ಕೃತಿಯನ್ನು ಬೆಳೆಸಲು ನಾನು ಮುಂದಾಗಬೇಕು" ಎಂಬುದು ಬಾಳೇಶ ಲಕ್ಷೆಟ್ಟಿಯವರ ಹಂಬಲ. ರಾಷ್ಟ್ರೀಯತೆಯ ಒಲವನ್ನೂ, ಪ್ರಗತಿಶೀಲ ಮನೋಧರ್ಮವನ್ನೂ ಹೊಂದಿರುವ ಅವರಿಗೆ ಈ ದಿಸೆಯಲ್ಲಿ ಹೆಚ್ಚಿನ ಯಶಸ್ಸು ದೊರೆಯಲೆಂದೂ, ನಾಡು-ನುಡಿಗೆ ಅವರಿಂದ ಇನ್ನೂ ಹೆಚ್ಚಿನ ಸೇವೆ ಸಲ್ಲುವಂತಾಗಲೆಂದೂ ಹಾರೈಸುತ್ತೇನೆ.

'ವೀಣೆ'

(ಅಭಿನಂದನ ಗ್ರಂಥ)

೧೯೯೩

# ಶ್ರೀಮತಿ ಲೀಲಾದೇವಿ ಪ್ರಸಾದ

ಶ್ರೀ ಎಚ್. ಎಸ್. ರೇಣುಕಪ್ರಸಾದ್-ಶ್ರೀಮತಿ ಲೀಲಾದೇವಿ ಪ್ರಸಾದ್ ದಂಪತಿಗಳನ್ನು ನಾನು ಮೊದಲು ಕಂಡದ್ದು ಗುರುಗಳಾದ ಪ್ರೊ|| ಸ. ಸ. ಮಾಳವಾಡರ ಮನೆಯಲ್ಲಿ ಎಂದು ನೆನಪು. ಶ್ರೀಮತಿ ಶಾಂತಾದೇವಿ ಮಾಳವಾಡರು ಲೀಲಾದೇವಿಯವರನ್ನು ಒಡಹುಟ್ಟಿದ ತಂಗಿಯೆಂದೇ ಕಾಣುತ್ತ ಬಂದಿದ್ದಾರೆ. ನನ್ನ ಶ್ರೀಮತಿ, ಶಾಂತಾದೇವಿ ಮಾಳವಾಡರ ಚಿಗವ್ವನ ಮಗಳು. ಅಲ್ಲದೆ, ಲೀಲಾದೇವಿ ಹಾಗೂ ಶ್ರೀಮತಿ ಶಾಂತಾ ಕಣವಿ ಬಾಲ್ಯ ಸ್ನೇಹಿತೆಯರು. ಹೀಗಾಗಿ ಲೀಲಾದೇವಿಗೂ ನನ್ನ ಶ್ರೀಮತಿಗೂ ಮಾಳವಾಡ ದಂಪತಿಗಳು ಪ್ರೀತಿಯ "ಅಕ್ಕ-ಮಾಮಾ" ಆದರು. ಈಗಲೂ ಲೀಲಾದೇವಿ ಪ್ರಸಾದ್ ಶಾಂತಾ ಕಣವಿಯವರು ಕೂಡಿದಾಗೆಲ್ಲ ತಮ್ಮ ಬಾಲ್ಯದ ಅನುಭವಗಳನ್ನು ಮೆಲುಕಾಡಿಸಿ ಸುಖಿಸುವುದುಂಟು.

ರೇಣುಕ ಪ್ರಸಾದರು ಬಹಳ ವರ್ಷಗಳ ಹಿಂದೆ ತಮ್ಮ ವಕೀಲರ ಸಂಘಕ್ಕೆ ತನ್ನನ್ನು ಕರೆದುಕೊಂಡು ಹೋಗಿ ಭಾಷಣ ಮಾಡಿಸಿದ್ದು ನೆನಪಿದೆ. ಈಚೆಗೆ ಅವರ ಭೆಟ್ಟಿ ತುಂಬ ವಿರಳವಾಗಿದೆ. ಪ್ರಸಾದರದು ಮಾತು ಕಡಿಮೆ, ಮೌನವಾಗಿಯೇ ತಮ್ಮ ಕೆಲಸದಲ್ಲಿ ಮಗ್ನವಾಗಿರುವ ಸ್ವಭಾವ. ಲೀಲಾದೇವಿ ಮಾತಿನಲ್ಲಿ ತುಂಬ ಗಳಿಬಿಳಿ. ಹಾಗೆಂದು ಕೆಲಸದಲ್ಲಿ ಎಂದೂ ಹಿಂದೆ ಬಿದ್ದವರಲ್ಲ. ಎರಡನ್ನೂ ಸಮಬಲದಲ್ಲಿ ತೂಗಿಸಿಕೊಂಡು ಸಾರ್ವಜನಿಕ ಕಾರ್ಯಗಳಲ್ಲಿ, ಅದರಲ್ಲೂ ಮಹಿಳೆಯರ ಚಟುವಟಿಕೆ ಗಳಲ್ಲಿ ತಮ್ಮನ್ನು ಬಿಡುವಿಲ್ಲದಂತೆ ತೊಡಗಿಸಿಕೊಂಡು ಮೇಲ್ಮೆಯನ್ನು ಸಾಧಿಸುತ್ತ ಬಂದವರು. ಈ ಗುಣ ಬಹುಶಃ ಅವರ ತಾಯಿ ಶ್ರೀಮತಿ ಗುರುದೇವಿ ಹಿರೇಮಠ ಅವರಿಂದ ಒದಗಿದ ಸಂಸ್ಕಾರವಿರಬಹುದು.

ಲೀಲಾದೇವಿಯವರ ತಂದೆ ಶ್ರೀ ವ್ಹಿ. ಎಸ್. ಹಿರೇಮಠರು ಧಾರವಾಡ ಜಿಲ್ಲಾಧಿಕಾರಿಗಳಾಗಿ ಬಂದದ್ದು- ಅದರಲ್ಲೂ ಧಾರವಾಡದಂಥ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕೇಂದ್ರಕ್ಕೆ ಮೊದಲ ಸಲ ಕನ್ನಡಿಗರು ಕಲೆಕ್ಟರಾಗಿ ಬಂದುದು ಆಗ ಇಲ್ಲಿಯ ಜನತೆಯಲ್ಲಿ ಉತ್ಸಾಹವನ್ನೂ, ಗೆಲುವನ್ನೂ ಮೂಡಿಸಿತ್ತು. ಶ್ರೀಮತಿ ಗುರುದೇವಿ ಹಿರೇಮಠರದು ಅತ್ಯಂತ ಸ್ಫುರದ್ರೂಪಿ ವ್ಯಕ್ತಿತ್ವ. ಧಾರವಾಡದ ಅಕ್ಕನ ಬಳಗ, ಜಿಲ್ಲಾ ಮಹಿಳಾ ಮಂಡಳಿ, ಜಿಲ್ಲಾ ಸಮಾಜಕಲ್ಯಾಣ ಕೇಂದ್ರ ಮೊದಲಾದ ಹತ್ತು ಹಲವು ಸಂಸ್ಥೆಗಳ ಕಾರ್ಯಗಳಲ್ಲಿ ಶಾಂತಾದೇವಿ ಮಾಳವಾಡ ಹಾಗೂ ಸರಸ್ವತಿದೇವಿ ಗೌಡರ ಜೊತೆಗೂಡಿ, ಅಧಿಕಾರ, ಐಶ್ವರ್ಯದ ಅಹಂಕಾರದ ಸೋಂಕಿಲ್ಲದೆ ಕೆಲಸ ಮಾಡಿ ಸಾರ್ವಜನಿಕರ ಪ್ರೀತಿ-ಗೌರವಗಳಿಗೆ ಪಾತ್ರರಾಗಿದ್ದರು. ವಚನ ಸಾಹಿತ್ಯದಲ್ಲಿ ಆಸಕ್ತಿವಹಿಸಿ ತ್ರಿಪದಿಯಲ್ಲಿ 'ಅಕ್ಕಮಹಾದೇವಿ ಪುರಾಣ', 'ನೋವು-ನಲಿವು' ಕವನ ಸಂಗ್ರಹ, 'ವಚನಕಾರರು' ಮೊದಲಾದ ಕೃತಿಗಳನ್ನು ರಚಿಸಿದರು. ಈ ಹಿನ್ನೆಲೆಯಲ್ಲಿ ಬೆಳೆದ ಲೀಲಾದೇವಿ ಪ್ರಸಾದ್ ಸಹಜವಾಗಿಯೇ ಆ ಗುಣಗಳನ್ನು ಮೈಗೂಡಿಸಿಕೊಂಡು ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಸೇವೆಗೈಯುತ್ತ ರಾಜಕೀಯ ಕ್ಷೇತ್ರದಲ್ಲಿಯೂ ಪಳಗಿ, ಬೆಳೆದು ಬಂದ ಬಗೆ ನಿಜಕ್ಕೂ ಬೆರಗುಗೊಳಿಸುವಂತಹದು.

ಧಾರವಾಡದಲ್ಲಿ ಹುಟ್ಟಿ ಬೆಳಗಾವಿಯಲ್ಲಿ ಬೆಳೆದು, ಬೆಂಗಳೂರಿನಲ್ಲಿ ಬೇರೂರಿದ ಲೀಲಾದೇವಿ ಪ್ರಸಾದ್ ಶಾಸಕಿಯಾಗಿ, ಮಂತ್ರಿಯಾಗಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಚಟುವಟಿಕೆಗಳಿಗೆ ಹೆಚ್ಚಿನ ಚಾಲನೆಯಿತ್ತು ಜನಪ್ರಿಯರಾದದ್ದು ಹಲವಾರು ಸಮಿತಿಗಳಲ್ಲಿದ್ದು ಕರ್ತವ್ಯ ದಕ್ಷತೆಯನ್ನು ಮೆರೆದಿದ್ದು ಈಗ ಇತಿಹಾಸ. ಕಾದಂಬರಿ, ನಾಟಕ, ವೈಚಾರಿಕ ಬರವಣಿಗೆಯಲ್ಲೂ ಕೈಯಾಡಿಸಿ, ರಾಜಕೀಯ ಏಳು-ಬೀಳುಗಳನ್ನು ಲೆಕ್ಕಿಸದೆ ಇಂದಿಗೂ ಕ್ರಿಯಾಶೀಲರಾಗಿರುವುದನ್ನು ಕಂಡರೆ ಯಾರಿಗೂ ಮೆಚ್ಚುಗೆಯುಂಟಾಗದಿರದು.

ಶ್ರೀಮತಿ ಲೀಲಾದೇವಿ ಪ್ರಸಾದ್ ತಾಯಿಯಿಂದ ಬಳುವಳಿಯಾಗಿ ಬಂದ ಗುಣಗಳನ್ನು ಅಳವಡಿಸಿಕೊಂಡು ಬೆಳೆದಂತೆ ಶ್ರೀ ಎಚ್. ಎಸ್. ರೇಣುಕಪ್ರಸಾದ್ ತಂದೆಯ ಪ್ರಭಾವವನ್ನು ಅರಗಿಸಿಕೊಂಡು ತಮ್ಮ ಬದುಕಿಗೆ ಮೆರುಗನ್ನೂ ಅರ್ಥವಂತಿಕೆಯನ್ನೂ ತಂದುಕೊಂಡರೆಂದು ಹೇಳಿದರೆ ತಪ್ಪಾಗದು. ಪ್ರಸಿದ್ಧ ವಿದ್ವಾಂಸರೂ, ಕೀರ್ತನಕಲಾಪ್ರವೀಣರೂ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೂ ಆಗಿದ್ದ ಪದ್ಮಶ್ರೀ ಡಾ|| ಬಿ. ಶಿವಮೂರ್ತಿ ಶಾಸ್ತ್ರಿಗಳು ಕನ್ನಡ ಸಾಂಸ್ಕೃತಿಕ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಅಮೋಘವಾದದ್ದು. ನಾಡಿನ ಮೂಲೆ ಮೂಲೆಗಳಲ್ಲಿ ಸಂಚರಿಸಿ ಅಪಾರ ಸಂಶೋಧನ ಸಾಮಗ್ರಿಗಳನ್ನು ಸಂಗ್ರಹಿಸಿ, ಗಡಿನಾಡುಗಳ ಭಾಗಗಳಲ್ಲಿ ಜಾಗೃತಿಯನ್ನುಂಟುಮಾಡಿ, ಕರ್ನಾಟಕ ಏಕೀಕರಣಕ್ಕಾಗಿ ದುಡಿದು ಸಫಲರಾದ ಶಾಸ್ತ್ರಿಗಳ ಸೇವೆಯನ್ನು ಕನ್ನಡಿಗರು ಮರೆಯುವಂತಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರ ಸಂಖ್ಯೆ ಹತ್ತಾರು ಪಟ್ಟು ಹೆಚ್ಚಾದದ್ದು ಅವರ ಕಾಲದಲ್ಲಿಯೇ. 1955ರಲ್ಲಿಯೇ ನಾನು ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯನಾಗಲು ಕಾರಣಕರ್ತರಾದ ಅವರನ್ನು ಈ ಸಂದರ್ಭದಲ್ಲಿ ನೆನೆಯದಿರಲಾರೆ. 1953ರಲ್ಲಿ ಜರುಗಿದ ಲೀಲಾದೇವಿ ಮತ್ತು ರೇಣುಕಪ್ರಸಾದ್‌ರ ಮದುವೆ ಒಂದು ರೀತಿಯಲ್ಲಿ - ಅಂದರೆ 50 ವರ್ಷಗಳ ಹಿಂದೆ - ಕರ್ನಾಟಕ ಏಕೀಕರಣದ ಸಂಕೇತವಾಗಿತ್ತೆಂದು ಪ್ರೊ|| ಮಾಳವಾಡರು ಹೇಳುತ್ತಿದ್ದುದು ಈಗ ನೆನಪಿಗೆ ಬರುತ್ತಿದೆ. ಶ್ರೀ ರೇಣುಕ ಪ್ರಸಾದ್‌ರು ಸಾಹಿತ್ಯ, ಸಂಗೀತ, ಶಿಕ್ಷಣವನ್ನೊಳಗೊಂಡು ಹಲವಾರು ಸಾಮಾಜಿಕ ಕ್ಷೇತ್ರಗಳಲ್ಲಿ ಆಸಕ್ತಿವಹಿಸಿ ಶ್ರೀಮತಿ ಲೀಲಾದೇವಿಯವರ ಸ್ವತಂತ್ರ ವಿಚಾರ ಪ್ರವೃತ್ತಿ ಹಾಗೂ ಕಾರ್ಯಬಾಹುಳ್ಯಕ್ಕೆ ಯಾವ ರೀತಿಯಿಂದಲೂ ಹಿನ್ನಡೆಯೊದಗದಂತೆ ನೋಡಿಕೊಂಡಿರುವುದು ನಿಜಕ್ಕೂ ಪ್ರಶಂಸನೀಯ. 'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಎಂಬ ಮಾತು ಎಷ್ಟು ಅರ್ಥಪೂರ್ಣ!

ಹಿಡಿದ ಕೆಲಸವನ್ನು ಶ್ರದ್ಧೆಯಿಂದ ಮಾಡಿ ಮುಗಿಸುವುದರಲ್ಲಿ ಈ ದಂಪತಿಗಳಿಗೆ ಇರುವ ಆಸಕ್ತಿ ಅನುಕರಣೀಯವಾಗಿದೆ. ಇಂಥ ಹಿಗ್ಗನ್ನು ತೃಪ್ತಿಯನ್ನು ಪಡೆಯುವ ಅವಕಾಶ ಅವರಿಗೆ ನಿರಂತರವೂ ಒದಗುತ್ತಿರಲಿ. ಇವರು ದೀರ್ಘಾಯುಷಿಗಳಾಗಿ ತಮ್ಮ ಸಂಸಾರ ಸಾರಸರ್ವಸ್ವವನ್ನು ಪ್ರೀತಿಯಿಂದ ಎಲ್ಲರೊಂದಿಗೆ ಹಂಚಿಕೊಂಡು ನಾಡುನುಡಿಯ ಸೇವೆಯಲ್ಲಿ ಹೆಚ್ಚಿನ ಚೈತನ್ಯವನ್ನು ಪಡೆಯುವಂತಾಗಲಿ ಎಂದು ನನ್ನ ಶ್ರೀಮತಿಯವರೂ ನಾನೂ ಜೊತೆಗೂಡಿ ಹಾರೈಸುತ್ತೇವೆ.

(ಇಬ್ಬರು ಇನ್ನೊಬ್ಬರ ತಪಸ್ಸಿನ ಫಲವಾಗಿ, ಒಬ್ಬರು ಇನ್ನೊಬ್ಬರನ್ನು ಪಡೆದ ಮೊದಲ ದಂಪತಿಗಳನ್ನು - ಪ್ರಪಂಚದ ತಾಯಿತಂದೆಗಳನ್ನು - ಸ್ತುತಿಸುತ್ತೇನೆ)

**'ಸುವರ್ಣಬಹುಮುಖಿ'**

(ಅಭಿನಂದನ ಗ್ರಂಥ) ೨೦೦೩

# ಸಂಸ್ಕೃತಿಯ ಅನನ್ಯಸೇವಕ : ಪಾರ್ಶ್ವನಾಥ

ಕರ್ನಾಟಕದ ಅನೇಕ ಮಹತ್ವದ ವ್ಯಕ್ತಿಗಳ ಜೀವನದಲ್ಲಿ ಧಾರವಾಡ ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಕಾಲದಲ್ಲಿ ತನ್ನ ಪ್ರಭಾವವನ್ನು ಬೀರದೆ ಹೋಗಿಲ್ಲ ಎಂದರೆ ಅತಿಶಯೋಕ್ತಿಯೆನಿಸದು. ಪ್ರದೇಶ, ವೃತ್ತಿ, ಹವ್ಯಾಸಗಳು ಭಿನ್ನವಾಗಿರಬಹುದು. ಆದರೆ ನಾಡು, ನುಡಿ, ಕಲೆ, ಸಂಸ್ಕೃತಿಯ ಸಂದರ್ಭದಲ್ಲಿ, ಹೋರಾಟದ ಹಾದಿಯನ್ನು ಕಂಡುಕೊಳ್ಳುವ ದಿಸೆಯಲ್ಲಿ ಧಾರವಾಡ ಅಂಥವರನ್ನು ಆಯಸ್ಕಾಂತದಂತೆ ತನ್ನ ಕಡೆಗೆ ಸೆಳೆದುಕೊಂಡದ್ದಿದೆ, ಅವರ ಬದುಕಿನಲ್ಲಿ ಸುವರ್ಣರೇಖೆಯಾಗಿ ಮೂಡಿದ್ದಿದೆ. ಹಾಗೆ ಧನ್ಯತೆ ಪಡೆದವರಲ್ಲಿ ಡಾ. ಹೆಚ್. ಎ. ಪಾರ್ಶ್ವನಾಥ ಅವರೂ ಒಬ್ಬರು.

ಹುಟ್ಟಿದ್ದು ಹಾಸನದಲ್ಲಿ, ವಿದ್ಯಾರ್ಹತೆ ಗಳಿಸಿದ್ದು ಮೈಸೂರಿನಲ್ಲಿ, ಅಧ್ಯಾಪಕರಾಗಿ ಸೇವೆ ಸಲ್ಲಿಸಿದ್ದು ಬಳ್ಳಾರಿ, ಬೆಂಗಳೂರು, ಮೈಸೂರು ಹಾಗೂ ಹುಬ್ಬಳ್ಳಿ ಮೆಡಿಕಲ್ ಕಾಲೇಜುಗಳಲ್ಲಿ. ಹನ್ನೆರಡು ವರ್ಷಗಳಷ್ಟು ದೀರ್ಘಕಾಲ (೧೯೭೯-೯೧) ನಿರಂತರವಾಗಿ ಅಧ್ಯಾಪಕ ವೃತ್ತಿಯಲ್ಲಿ. ಅಭಿವೃದ್ಧಿಯ ದಾರಿಯಲ್ಲಿ ಸಾಗಿದ್ದು ಮಾತ್ರ ಹುಬ್ಬಳ್ಳಿ ಕರ್ನಾಟಕ ಮೆಡಿಕಲ್ ಕಾಲೇಜಿನಲ್ಲಿ. ಹುಬ್ಬಳ್ಳಿ-ಧಾರವಾಡ ಅವಳಿನಗರಗಳು ಅನೇಕ ವೇದಿಕೆಗಳ ಮೂಲಕ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅವಿನಾಭಾವದಿಂದ ಪರಸ್ಪರ ಪೂರಕವಾಗಿ ಕೆಲಸ ಮಾಡುತ್ತ ಬಂದಿವೆ. ಆದರೂ ಹುಬ್ಬಳ್ಳಿ ಬಹುಮಟ್ಟಿಗೆ ವಾಣಿಜ್ಯ ಕೇಂದ್ರವಾಗಿಯೇ ಉಳಿದಿದೆ. ಇಂಥ ಸಂದರ್ಭದಲ್ಲಿ ಕಳೆದ ವರ್ಷ ನವಂಬರ ೧೭ರಿಂದ ಮೂರು ದಿನ ಏಕಕಾಲಕ್ಕೆ ಎರಡೂ ನಗರಗಳ ಏಳೆಂಟು ವೇದಿಕೆಗಳಲ್ಲಿ ನಡೆದ ಧಾರವಾಡ ಜಿಲ್ಲಾ ಉತ್ಸವದ ಕಾರ್ಯಕ್ರಮಗಳು ಸಾಂಸ್ಕೃತಿಕ ಬೆಸುಗೆಯನ್ನು ಬಲಪಡಿಸುವಲ್ಲಿ ಹೆಚ್ಚಿನ ಯಶಸ್ಸು ಸಾಧಿಸಿದವೆಂದೇ ಹೇಳಬಹುದು. ಈ ಉತ್ಸವದ ಅನೇಕ ಉಪಸಮಿತಿಗಳಲ್ಲಿ ಒಂದಾದ ನಾಟಕ ವಿಭಾಗದ ಸದಸ್ಯರಾಗಿದ್ದ ಡಾ|| ಪಾರ್ಶ್ವನಾಥರು, ಡಾ|| ಸಿದ್ಧಲಿಂಗಪಟ್ಟಣಶೆಟ್ಟಿಯವರೊಂದಿಗೆ ಸಲ್ಲಿಸಿದ ಸೇವೆಯಲ್ಲಿ ಅವರು ಈ ಹಿಂದೆ ಈ ಕ್ಷೇತ್ರದಲ್ಲಿ ಪಡೆದ ಅನುಭವ ನೆರವಿಗೆ ಬಂದುದರಲ್ಲಿ ಸಂದೇಹವಿಲ್ಲ.

ಹುಬ್ಬಳ್ಳಿ ಮೆಡಿಕಲ್ ಕಾಲೇಜಿನ ಕನ್ನಡ ಸಂಘದ ಕಾರ್ಯಾಧ್ಯಕ್ಷ ಹಾಗೂ ಉಪಾಧ್ಯಕ್ಷರಾಗಿ ಹತ್ತುವರ್ಷಗಳ ಕಾಲ ಇವರು ಕೈಕೊಂಡು ನಿರ್ವಹಿಸಿದ ಚಟುವಟಿಕೆಗಳಂತೂ ತುಂಬ ಚೇತೋಹಾರಿಯಾಗಿರುತ್ತಿದ್ದುದನ್ನು ನಾನು ಕಂಡಿದ್ದೇನೆ. ಉಪನ್ಯಾಸ, ಕವಿಗೋಷ್ಠಿ, ನಾಟಕೋತ್ಸವ ಇತ್ಯಾದಿ ಹಲವಾರು ಕಾರ್ಯಕ್ರಮಗಳಿಗೆ ನನ್ನನ್ನು ಅತಿಥಿಯಾಗಿ ಬರಮಾಡಿಕೊಂಡು ಗೌರವಿಸಿದ್ದುಂಟು. ಆ ಸಂದರ್ಭಗಳಲ್ಲೆಲ್ಲ ಪಾರ್ಶ್ವನಾಥರ ಕ್ರಿಯಾಶೀಲತೆಯನ್ನು ಕಂಡು ನಾನು ಬೆರಗುಪಟ್ಟದ್ದುಂಟು. ಸುಸಜ್ಜಿತವಾದ ಆ ಕಾಲೇಜಿನ ಸಭಾಗೃಹ (Auditorium) ಅವರ ಕಲಾತ್ಮಕ ಸ್ಪರ್ಶದಿಂದ ಇನ್ನಷ್ಟು ಕಳೆಗೊಂಡು ಕಲಾಸಕ್ತರನ್ನು ಆಕರ್ಷಿಸುತ್ತಿತ್ತು. ನಮ್ಮ ಕರ್ನಾಟಕ

ವಿಶ್ವವಿದ್ಯಾಲಯದ ಪ್ರಸಾರಾಂಗದ ವಿಶೇಷೋಪನ್ಯಾಸಗಳಿಗೆ ಆಮಂತ್ರಿತರಾಗುತ್ತಿದ್ದ ವಿದ್ವಾಂಸರನ್ನು, ಸಾಹಿತಿಗಳನ್ನೂ ಡಾ|| ಪಾರ್ಶ್ವನಾಥ ಹಾಗೂ ಅಲ್ಲಿಯ ಕನ್ನಡ ಸಂಘದ ಪದಾಧಿಕಾರಿಗಳು ತಮ್ಮ ಸಂಘಕ್ಕೂ ಕರೆದೊಯ್ದು ಉಪಚರಿಸದೆ ಬಿಡುತ್ತಿರಲಿಲ್ಲ. ಅಂಥ ಒಂದು ಸಂದರ್ಭದಲ್ಲಿ ಶ್ರೀರಂಗರನ್ನು ನಾನು ಅವರ ಕಾಲೇಜಿಗೆ ಕರೆದುಕೊಂಡು ಹೋದಾಗ ಅಲ್ಲಿಯ ಸುಂದರ ಸಭಾಗೃಹವನ್ನು ನೋಡಿ, "ಭಾಷಣ ಮಾಡುವದಕ್ಕಿಂತ ಇಲ್ಲಿ ನಾನೊಂದು ನಾಟಕವನ್ನಾಡಿದ್ದರೆ ಹೆಚ್ಚು ಸಂತೋಷವಾಗುತ್ತಿತ್ತು" ಎಂದು ಉದ್ಗಾರವೆತ್ತಿದ್ದುಂಟು.

ಕೈಲಾಸಂ ಅವರ ವ್ಯಕ್ತಿತ್ವ ಹಾಗೂ ಕೃತಿಗಳಿಂದ ತೀವ್ರ ಪ್ರಭಾವಿತರಾಗಿದ್ದ ಪಾರ್ಶ್ವನಾಥರು ಕೆ. ಎಂ. ಸಿ. ವೇದಿಕೆಯಲ್ಲಿ ೧೯೮೦ರಿಂದ ಪ್ರಾರಂಭಿಸಿದ್ದ ಕೈಲಾಸಂ ದಿನಾಚರಣೆಯನ್ನು ಇಂದಿಗೂ ಯಶಸ್ವಿಯಾಗಿ ನಿರ್ವಹಿಸಿಕೊಂಡು ಬರಲಾಗುತ್ತಿದೆ. ಧಾರವಾಡದ ರಂಗಾಸಕ್ತರು ಹಾಗೂ ರಂಗಕರ್ಮಿಗಳ ಒಡನಾಟದಿಂದ ಅವರು ಹೆಚ್ಚಿನ ಚೈತನ್ಯವನ್ನು ಪಡೆದುಕೊಂಡದ್ದಲ್ಲದೆ ರಂಗಭೂಮಿಯ ನಿರಂತರ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡ ಕಾರಣದಿಂದ ೧೯೮೮ನೇ ಸಾಲಿನ ಕರ್ನಾಟಕ ನಾಟಕ ಅಕಾಡೆಮಿಯ ಫೆಲೋಶಿಪ್‌ಗೆ ಪಾತ್ರರಾದುದರಲ್ಲಿ ಆಶ್ಚರ್ಯವೇನೂ ಇಲ್ಲ. ನೀನಾಸಂ ಹಾಗೂ ಪೂನಾ ಫಿಲಂ ಇನ್‌ಸ್ಟಿಟ್ಯೂಟ್ ಒಳಗೊಂಡ ಅನೇಕ ಸಂಸ್ಥೆಗಳ ತರಬೇತಿಗಳಲ್ಲಿ ಭಾಗವಹಿಸಿದ್ದಲ್ಲದೆ ನೂರಾರು ನಾಟಕಗಳ ಅಸಂಖ್ಯಾತ ಪ್ರಯೋಗಗಳಲ್ಲಿ ಹಾಗೂ ಬೀದಿ ನಾಟಕಗಳಲ್ಲಿ, ಚಲನಚಿತ್ರಗಳಲ್ಲಿ ನಟಿಸಿದ ಪಾರ್ಶ್ವನಾಥರಿಗೆ ಅಭಿನಯಕಲೆ ಬದುಕಿನ ಒಂದು ಭಾಗವಾಗಿಬಿಟ್ಟಿದೆ.

ಇವರ ರಂಗಸ್ನೇಹಿತರಾಗಿದ್ದ ಪ್ರೊ. ಎಸ್. ಆರ್. ತೋಂಟದಾರ್ಯರು ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾದ ನಂತರ ಧಾರವಾಡವನ್ನು ಬಿಟ್ಟು ಹೋಗುವುದು ಅನಿವಾರ್ಯವಾಯಿತು. ಆದರೆ ಸ್ವಲ್ಪ ಕಾಲ ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ಹಾಗೂ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯದ ಜಂಟಿ ನಿರ್ದೇಶಕರಾಗಿ ಪಾರ್ಶ್ವನಾಥರು ನಿವೃತ್ತಿಯ ನಂತರ ಪುನಃ ಧಾರವಾಡಕ್ಕೆ ಬರುವಂತಾದುದು ಎಂಥ ಯೋಗಾಯೋಗ! ಅವರೀಗ ಧಾರವಾಡದ ಎಸ್.ಡಿ.ಎಂ. ಮೆಡಿಕಲ್ ಕಾಲೇಜಿನ ರೋಗಲಕ್ಷಣಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ವೃತ್ತಿ-ಪ್ರವೃತ್ತಿಗಳೆರಡರಲ್ಲಿಯೂ ಉನ್ನತಿಕೆಯನ್ನು ಸಾಧಿಸಿ ಇವರಂತೆ ಎರಡರಲ್ಲಿಯೂ ಸಮತೂಕವನ್ನು ಕಾಪಾಡಿಕೊಂಡು ಬಂದವರು ವಿರಳವೆಂದೇ ಹೇಳಬಹುದು. ಬೆಂಗಳೂರು-ಮೈಸೂರುಗಳಿಗಿಂತ ಹುಬ್ಬಳ್ಳಿ-ಧಾರವಾಡಗಳೆರಡರ ಸ್ನೇಹ ಬಲವತ್ತರವಾಗಿರುವುದರ ಬಗೆಗಿನ ಕೃತಜ್ಞತಾಭಾವವನ್ನು ಅವರ ಮುಖದ ಪ್ರಸನ್ನತೆಯಲ್ಲಿಯೇ ಕಂಡುಕೊಳ್ಳಬಹುದು.

ಸಾಹಿತ್ಯ ಹಾಗೂ ಸಂಶೋಧನೆಯಲ್ಲಿ ಅಷ್ಟೇ ಆಸ್ಥೆಯುಳ್ಳ ಪಾರ್ಶ್ವನಾಥರು ಹಲವಾರು ಸಾಹಿತ್ಯಗೋಷ್ಠಿಗಳಲ್ಲಿ ಭಾಗವಹಿಸಿ ವಿಚಾರವಂತ ಪ್ರಬಂಧಗಳನ್ನು ಮಂಡಿಸಿದ್ದನ್ನೂ, ಉಪನ್ಯಾಸಗಳಲ್ಲಿ ವೈಚಾರಿಕತೆಯ ಕಡೆಗೆ ಒಲವು ತೋರಿಸಿದ್ದನ್ನೂ ನಾನು ಕಂಡಿದ್ದೇನೆ. 'ಸನ್ನಿಧಿ', 'ರಂಗಸಂಗ', 'ವ್ಯಕ್ತಿ-ಶಕ್ತಿ', 'ರಂಗಲೋಕ'ಗಳಂಥ ಕೃತಿಗಳು ಆಯಾ ಕ್ಷೇತ್ರಗಳಲ್ಲಿ ಅವರು ಸಾಧಿಸಿದ

ಪರಿಣತಿಗೆ ಸಾಕ್ಷಿಯಾಗಿವೆ.

ಹೀಗೆ ಹಲವು ರಂಗಗಳಲ್ಲಿ ತಮ್ಮ ಹೆಗ್ಗಳಿಕೆಯನ್ನು ಮೆರೆದಿದ್ದರೂ ಯಾವುದೇ ಬಗೆಯ ಆಡಂಬರಕ್ಕೆ ಎಡೆಗೊಡದ ವಿನಯ, ಸರಳ ಸಜ್ಜನಿಕೆ, ಹೃದಯವಂತಿಕೆ ಹಾಗೂ ಹಾಸ್ಯ ಪ್ರವೃತ್ತಿಯಿಂದ ಎಲ್ಲರ ಪ್ರೀತಿಗೆ ಪಾತ್ರರಾಗಿರುವ ಈ ಸ್ನೇಹಜೀವಿ ಅರವತ್ತರ ಪ್ರಾಯದಲ್ಲಿಯೂ ಸದಾ ಪುಟಿಯುವ ಕಾರಂಜಿಯಂತೆ ಕ್ರಿಯಾಶೀಲರಾಗಿರುವುದನ್ನು ನೋಡುವುದೇ ಒಂದು ಸಂತೋಷ. ಜಡತೆ, ನಿಷ್ಕ್ರಿಯತೆ, ಸಂಸ್ಕೃತಿವಿಹೀನತೆಗೆ ಈಡಾಗಿರುವ ಇಂದಿನ ಬಹುಸಂಖ್ಯೆಯ ಯುವಕರಿಗೆ ಡಾ. ಎಚ್. ಎ. ಪಾರ್ಶ್ವನಾಥರಂಥ ಸುಸಂಸ್ಕೃತ ವ್ಯಕ್ತಿಗಳು ಮಾರ್ಗದರ್ಶಕರಾಗಿ ನಿಲ್ಲುವಂತಾದರೆ ಅಂಥ ಭಾಗ್ಯ ಬೇರೊಂದಿಲ್ಲ. ಇವರಿಂದ ನಾಡು-ನುಡಿಯ ಸೇವೆ ಇತೋಪ್ಯತಿಶಯವಾಗಿ ನಡೆಯಲೆಂದು ಹಾರೈಸಿ, ಅರವತ್ತರ ಅಭಿನಂದನೆಯ ಸಂದರ್ಭದಲ್ಲಿ ಅವರಿಗೆ ಎಲ್ಲ ಶುಭಗಳನ್ನು ಕೋರುತ್ತೇನೆ.

**'ರತ್ನಕರಂಡಕ'**

(ಅಭಿನಂದನ ಗ್ರಂಥ)

೨೦೦೭

# ಮಧುರ ಚೆನ್ನರ ಅನುಭಾವ ಕಾವ್ಯ

ಮಧುರಚೆನ್ನರ ಕಾವ್ಯಸೃಷ್ಟಿ ಪ್ರಾರಂಭವಾದದ್ದು ೧೯೧೮ರ ಸುಮಾರಿಗೆ. ಅದು ಹೊಸಗನ್ನಡದ ಅರುಣೋದಯ ಕಾಲ. 'ನನ್ನ ನಲ್ಲ' ಹಾಗೂ ಅದರೊಂದಿಗಿನ ಕವಿತೆಗಳು ರಚನೆಗೊಂಡದ್ದು ೧೯೨೯-೩೦ರ ವೇಳೆಗೆ. 'ನನ್ನ ನಲ್ಲ' ಸಂಗ್ರಹ ಪ್ರಕಟಗೊಂಡದ್ದು ೧೯೩೩. ಇದು ನವೋದಯದ ಆರಂಭಕಾಲ. ಮಧುರ ಚೆನ್ನರ ಕಾವ್ಯದ ಆರಂಭ ಮತ್ತು ಬೆಳವಣಿಗೆಯ ಕಾಲದ ಅವಧಿ ಹನ್ನೆರಡು ವರ್ಷಗಳಿಗೆ ಸೀಮಿತವಾಗಿದೆ. ಆ ಮೇಲೂ ಅವರು ಕೆಲವು ಕವಿತೆಗಳನ್ನು ಬರೆದದ್ದುಂಟು. ಇತ್ತೀಚೆಗೆ ಪ್ರಕಟವಾಗಿರುವ (೧೯೮೮) 'ಆತ್ಮಶೋಧ' ಮಧುರಚೆನ್ನರ ಕಾವ್ಯ ಮತ್ತು ಆತ್ಮಕಥನಗಳ ಸಮಗ್ರ ಸಂಪುಟವಾಗಿದ್ದು ಅಭ್ಯಾಸಿಗಳಿಗೆ ಹೆಚ್ಚು ಅನುಕೂಲವಾಗಿದೆ. ಯಾಕೆಂದರೆ, ಮಧುರಚೆನ್ನರ ಆತ್ಮಕಥನಗಳು ಅವರ ಕಾವ್ಯದ ಹಿನ್ನೆಲೆಯನ್ನು ಅರಿಯಲು ಮಹತ್ವದ ಸಾಮಗ್ರಿಯನ್ನು ಒದಗಿಸುತ್ತವೆ. ಅಲ್ಲದೆ, ಜಾನಪದ ಸತ್ತ್ವದ ಪುನರುಜ್ಜೀವನದಲ್ಲಿ ಹಲಸಂಗಿ ಗೆಳೆಯರು ವಹಿಸಿದ ಮಹತ್ವದ ಪಾತ್ರವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಮಧುರಚೆನ್ನರ ಕಾವ್ಯದ ಭಾಷೆ, ಛಂದಸ್ಸು, ಪ್ರತಿಮೆ-ರೂಪಕಗಳ ಸಂದರ್ಭದಲ್ಲಿಯೂ ಈ ಜಾನಪದ ಸತ್ತ್ವ ಅವರ ಅನುಭವಗಳ ಸ್ವಂತಿಕೆ ಹಾಗೂ ಅಭಿವ್ಯಕ್ತಿಯ ತಾಜಾತನಕ್ಕೆ ಹೆಚ್ಚಿನ ಮೆರುಗನ್ನು ನೀಡಿದೆ. ಅದೇನೇ ಇದ್ದರೂ ಅವರ ಆಧ್ಯಾತ್ಮ ಸಾಧನೆಯ ಕಥನದ ಅಭಿವ್ಯಕ್ತಿಗೆ ಪ್ರಥಮದಲ್ಲಿ ಕವಿ ಕರ್ಮಕೌಶಲಕ್ಕೆ ಆದ್ಯತೆ ದೊರೆತದ್ದರಿಂದ ಅವರ ಯೌಗಿಕ ಹಾಗೂ ಅನುಭಾವೀ ಆಶಯಗಳು ಉನ್ನತ ಕಾವ್ಯ ಪ್ರತಿಭೆಯಿಂದ ಹೊರಹೊಮ್ಮಿ ಆಧುನಿಕ ಕನ್ನಡ ಕಾವ್ಯದಲ್ಲಿ ಮಧುರಚೆನ್ನರಿಗೆ ಸಹಜವಾಗಿಯೇ ಅನುಭಾವಿ ಕವಿ ಎಂಬ ಅಗ್ರಪಟ್ಟ ಒದಗಿ ಬಂದಿತೆಂದರೆ ತಪ್ಪಾಗದು.

ಮಧುರ ಚೆನ್ನರ ಕಾವ್ಯಸೃಷ್ಟಿಯಲ್ಲಿ ಮೂರು ಘಟ್ಟಗಳಿವೆ :೧. ಛಂದೋಬದ್ಧ ವಾಣಿಯೇ ಕವಿತೆಯೆಂದು ಭಾವಿಸಿ ಬರೆದದ್ದು ; ೨. ಭಾವವೇ ಕವಿತೆಯ ಜೀವವೆಂದು ಅರಿತು ರಚನೆ ಮಾಡಿದ್ದು; ೩. ಅನುಭಾವ ಕಾವ್ಯಕ್ಕೇ ತಮ್ಮೆಲ್ಲ ಕಾವ್ಯಶಕ್ತಿಯನ್ನೂ ಮೀಸಲಿರಿಸಿದ್ದು. ಮೊದಲ ಎರಡು ಘಟ್ಟಗಳಲ್ಲಿಯೂ ಅನುಭಾವದ ಮುಂಗುರುಹುಗಳನ್ನು ಅಲ್ಲಲ್ಲಿ ಗುರುತಿಸಬಹುದು. 'ಬಾ' ಎಂಬ ವಾರ್ಧಕ ಷಟ್ಪದಿಯಲ್ಲಿ 'ಸೊಬಗಿಂ ಕುಣಿವ ಸವಿಗಾರ'ನನ್ನು ಆಹ್ವಾನಿಸುವ ಸ್ವಗತದಲ್ಲಿ, 'ನರ್ತಕಿ ನೀನಾರೇ?' ಹಾಗೂ 'ಹೀಗೇಕೆ ಹುಚ್ಚೀ' ಎಂಬ ಕವಿತೆಗಳ ಮುಗ್ಧ ಹಾಗೂ ಮಧುರ ಭಾವದ ಬೆರಗಿನ ಅಭಿವ್ಯಕ್ತಿಯಲ್ಲಿ, ಕನ್ನೆಯ ಸ್ನೇಹದ ನಿಲುವಿನಲ್ಲಿ ಅನುಭಾವದ ಅಂಶಗಳು ಮೊಳಕೆಯೊಡೆಯುತ್ತಿರುವುದನ್ನು ಕಾಣಬಹುದು.

೨

'ಮುಗ್ಧತೆ, ಅನುಭವದ ದುರಂತ ಮತ್ತು ಪುನರ್ಜನ್ಮ' ದರ್ಶನ (Visionary) ಕಾವ್ಯದ ಮೂರು ಘಟ್ಟಗಳೆಂದು ಗುರುತಿಸಲಾಗಿದೆ. ಎರಡನೆಯ ಘಟ್ಟದಲ್ಲಿ ಅನುಭವದ ದ್ವಂದ್ವ ಹಾಗೂ

ಒಡಕುಗಳಿಂದ ಕವಿ ದುರಂತಕ್ಕೀಡಾಗುತ್ತಾನೆ. ಆದರೆ ಕೊನೆಯ ಘಟ್ಟದಲ್ಲಿ ಈ ದ್ವಂದ್ವಗಳನ್ನು ದಾಟಿ ಹೊಸ ಬೆಳಕನ್ನು ಕಾಣುತ್ತಾನೆ. ಜಗತ್ತಿನ ಶ್ರೇಷ್ಠ ಅನುಭಾವೀ ಕಾವ್ಯ ಈ ಮೂರು ಹಂತಗಳಲ್ಲಿ ಮೈದಾಳಿರುವುದನ್ನು ನೋಡಿದರೆ ಮಧುರಚೆನ್ನರ ಆತ್ಮಯಾತ್ರೆಯ ಕಥನವು ಇದೇ ರಚನೆಯನ್ನು ಹೊಂದಿರುವುದು ಆಕಸ್ಮಿಕವಿರಲಾರದು.

ಸಾಧಕ ಜೀವನದ ಕಷ್ಟ ಮೊದಲಿನಿಂದ ಕೊನೆಯವರೆಗೆ ಒಂದೇ ಬಗೆಯಾಗಿರುವುದೆಂಬ ತಪ್ಪು ಕಲ್ಪನೆಯನ್ನು ಹೋಗಲಾಡಿಸಿ, ಅದರಲ್ಲಿ ಮುಖ್ಯವಾಗಿ ಮೂರು ಪ್ರಕಾರಗಳಿರುವುದನ್ನು ಮಧುರಚೆನ್ನರು ಖಚಿತವಾದ ಸ್ವಾನುಭವದ ವಿವರಗಳೊಂದಿಗೆ 'ಬೆಳಗು' ಆತ್ಮ ಕಥನದಲ್ಲಿ ನಿರೂಪಿಸಿದ್ದಾರೆ. ಜೀವನದ ಅರ್ಥವನ್ನು ಸಹಜವಾಗಿ ತಿಳಿಸುವ 'ಸುಖ-ದುಃಖ' ಕವಿತೆಯೊಂದರಲ್ಲಿ ಮಾತ್ರ ಜಾನಪದ ರೀತಿಯ ತ್ರಿಪದಿಗಳಲ್ಲಿ ಈ ಮೂರು ಘಟ್ಟಗಳೂ ಮೂಡಿ ನಿಂತಿರುವುದನ್ನು ನೋಡಬಹುದು. 'ಸುಖವು ಬೀದಿಯ ನೆರಳ' ಎಂಬ ಮಾತಿನಲ್ಲಿ ಮೊದಲನೆಯ ಘಟ್ಟವನ್ನು ಸೂಚಿಸಿದ್ದರೆ 'ದುಃಖವು ದೂಡುವ ಬಿಸಿಲ' ಎಂಬಲ್ಲಿ ಎರಡನೆಯ ಘಟ್ಟದ ಸೂಚನೆಯಿದೆ. ಪ್ರತಿಯೊಂದು ನುಡಿಯೂ ದ್ವಂದ್ವಗಳ ನಡುವೆ ಸಿಕ್ಕು ಜೀವ ತಲ್ಲಣಿಸುವ ಚಿತ್ರಗಳನ್ನು ನೀಡುತ್ತದೆ:

ಹುತ್ತಾನೆ ತಟ್ಟೀವ/ಹಾವಾನೆ ಮೆಟ್ಟೀವ
ಹೆಡಿ ಜಜ್ಜಿ ಮಡಿದ ಮಿಡಿನಾಗ/ತಂಗೆಮ್ಮಾ
ನುಂಗೀದ ವಿಷವ ಕಕ್ಕೀತ/

ಈ ದುರಂತಗಳನ್ನು ದಾಟಿ ಮುಂದೆ ಹೋದಾಗ 'ಹುಲಿ ಹೋರಿಗರು'ವಾಗಿ ಮುಂದಿನ ಹಾದಿ 'ಮುಂಜಾನೆ' ಆಗುತ್ತದೆ. ಈ ಕವಿತೆಯ ಮುಂದಿನ ಭಾಗ ಅತ್ತು ಕರೆದು ಬಾಡಿ-ಬೆಂದು, ಕಡೆಗೊಮ್ಮೆ ಗಟ್ಟಿಗೊಂಡ ನಿರ್ದ್ವಂದ್ವ ಸ್ಥಿತಿಯನ್ನು ಬಣ್ಣಿಸುತ್ತದೆ. 'ಬೇಡೂದ ಮರೆತ ಘಳಿಗ್ಯಾಗ' 'ಆಡೂತ ಓಡಿಬಂದ ಹಿರಿ ಹರಕೆ'ಯಿಂದ ಒಳಹೊರಗ ನಮಗ ಹಿರಿಹಿಗ್ಗ'.

'ಧ್ರುವ', 'ನೋಂಪಿ', 'ಸಲಿಗೆಯ ಸಲ್ಲಾಪ', 'ಮುಸುಕು', 'ಕೆಸರಿನೊಳಗಿನ ಕಮಲ', 'ಸಿಡಿಲು' ಮುಂತಾದ ಕವನಗಳನ್ನು ಎರಡನೆಯ ಘಟ್ಟದಲ್ಲಿ ಗುರುತಿಸಿಕೊಳ್ಳಬಹುದು.

'ಕೆಸರಿನೊಳಗಿನ ಕಮಲ' ಒಂದು ಪ್ರತಿಮಾನಿಷ್ಠ ಕವಿತೆ. ಪ್ರಪಂಚದಲ್ಲಿದ್ದೂ ಪಾರಮಾರ್ಥದ ಕಡೆಗೆ ಮುಖ ಮಾಡಿರುವ, ದೇವನ ಕಾರುಣ್ಯಕ್ಕಾಗಿ ಕಾತರಿಸಿದ ಸಾಮಾನ್ಯ ಜೀವಿಯ ಆತ್ಮಾನುಸಂಧಾನವನ್ನು ಇದು ಚಿತ್ರಿಸುತ್ತದೆ.

ರೊಜ್ಜುಗೊಳದಲ್ಲಿ ನೀ
ಬಿದ್ದು ಬದುಕಿದೆಯಲ್ಲ!
ಚಿನ್ನ ಬಂದಂತೆ ಒರೆಗೆ

ಈ ಗೆಲುವಿಗೆ ಕಾರಣ ತನ್ನ ಆತ್ಮಶಕ್ತಿಯ ಅರಿವು ಹಾಗೂ ಮೇಲಿನ ಲೋಕದಲ್ಲಿರುವ ತನ್ನ ನಲ್ಲನನ್ನು ತನ್ನೆಡೆಗೆ ಬರಮಾಡಿಕೊಳ್ಳುವ ಹಂಬಲದ ತೀವ್ರತೆ : 'ನಾನಿಲ್ಲಿ ಕೆಳೆಗೆಳೆಸಿ ಕರೆಯುತಿಹೆನೊಳಗೆ ಒಳಗೆ'. ದೈವಿಕತೆಯ ಅನುಗ್ರಹಕ್ಕಾಗಿ, ತನ್ನ ಸರತಿ ಬಂದೇ ಬರುತ್ತದೆಂಬ ಭರವಸೆಯಿಂದ ಕಾಯುವ ಭಕ್ತನ ಶ್ರದ್ಧೆಯನ್ನು ಈ ಕವಿತೆ ಪ್ರತಿಬಿಂಬಿಸುತ್ತದೆ.

ದೇವರನ್ನು ಕಾಣಲು ಹಂಬಲಿಸಿ ಅವನು ಕಾಣದೇ ಇದ್ದಾಗ ಅವನ ಅಸ್ತಿತ್ವವನ್ನೇ ಆಹ್ವಾನಿಸುತ್ತ ತನ್ನ ಸಂಕಟವನ್ನು ನಿವೇದಿಸಿಕೊಳ್ಳುತ್ತ ಸಾಗುವ ಹಂತದ ಚಿತ್ರಣ 'ಸಲಿಗೆಯ ಸಲ್ಲಾಪ'.

**ನೀ ಹುಟ್ಟಿಸಿದರೆ ಹುಟ್ಟಿದೆನಲ್ಲದೆ ನನಗಿಲ್ಲಿತ್ತೇನು?**
**ನೀ ಹುಟ್ಟಿಸಿದವ ಹೊರಳಿ ನೋಡದಿರೆ ಗತಿಯೆನಗಿನ್ನೇನು?**

'ಮುಸುಕು' ಕವಿತೆಯಲ್ಲಿಯೂ ಇದೇ ಭಾವ; ಸಂಪರ್ಕ ಬಾರದ ದೂರತನದ ನೋವು:

**ನೀನು ನಿನ್ನ ತೋಟದಲ್ಲಿ**
**ನಾನು ನನ್ನ ಕೊಂಪೆಯಲ್ಲಿ**
**.... .... .... ....**
**ನಿನ್ನ ದಗದ ನಿಸಗೆ ಹಿರಿದು**
**ನನ್ನ ಕರುಳು ಬರಿದೋ ಬರಿದು**

ಸಾಧಕ ಜೀವಿ ತನ್ನ ಸಾಧನೆಯ ಮಾರ್ಗದಲ್ಲಿ ಕಳೆದಕೊಂಡದ್ದನ್ನು ಹುಡುಕುವ 'ಕಾಳ ರಾತ್ರಿ'ಯ ಅನುಭವ 'ಧ್ರುವ' ಕವಿತೆಯಲ್ಲಿದೆ. ಸುನೀತಿಯ ಮನಸ್ಸಿನ ಕಳವಳ ನಾಟಕೀಯ ಗುಣದೊಂದಿಗೆ ಅಂತಃಕರಣದ ತಂತಿಗಳನ್ನು ಮೀಟುವ ಶಕ್ತಿಯನ್ನು ಪಡೆದುಕೊಂಡಿದೆ. ಕತ್ತಲಲ್ಲಿ ಹಾರಿಹೋದ 'ಸಣ್ಣಗಿಣಿ' ಕಳೆದುಹೋದ ಮುಗ್ಧತೆಯ ಸಂಕೇತವೂ ಆಗಿದೆ. 'ಸುನೀತಿ ದೇವಿ ನಿದ್ದೆ ತಿಳಿದು ಎದ್ದು ಕುಳಿತಳು' ಎಂಬಲ್ಲಿ ಜೀವ ಜಾಗೃತವಾಗುವುದರ ಸೂಚನೆ ಇದ್ದರೂ-

**ದೇವರೆನಗೆ ರೆಕ್ಕೆಗಳನು**
**ಡೇಗೆಯಂಥ ಕಣ್ಣುಗಳನು**
**ಯೋಗಿಯಂಥ ಮನವ ಕೊಡುವನೆ?**
**ಕೊಟ್ಟರೀಗ ಮುಗಿಲನೇರಿ ನೋಡಿಬರುವೆನೆ?**

ಎನ್ನುವಲ್ಲಿ, ಇರುವ ಸ್ಥಿತಿಯನ್ನು ಮೀರುವ ಸಾಮರ್ಥ್ಯವನ್ನು ಆಕೆ ಇನ್ನೂ ಪಡೆದುಕೊಂಡಿಲ್ಲದಿರುವುದರ ಸೂಚನೆಯಿದೆ. 'ಎಲ್ಲ ಕಡೆಗೆ ಧ್ರುವನ ಭ್ರಾಂತಿಯೇ'. ಮಾತೃ ವಾತ್ಸಲ್ಯದ ಭಾವಸ್ಪಂದನ ಪ್ರತಿಯೊಂದು ವಿವರವನ್ನೂ ಇಲ್ಲಿ ಆಪ್ತವಾಗಿಸುತ್ತದೆ.

ನಿದ್ದೆ ತಿಳಿದು ಎದ್ದು ಕುಳಿತ ಮುಂದಿನ ಸ್ಥಿತಿ 'ನೋಂಪಿ'ಯಲ್ಲಿದೆ. ತಪಸ್ವಿಯಂತೆ ತನ್ನನ್ನು ತಾನು ಸಂಪೂರ್ಣ ಅರ್ಪಿಸಿಕೊಂಡ ಸಾಧನೆಯ ಕೆಚ್ಚನ್ನು ಇಲ್ಲಿ ಕಾಣುತ್ತೇವೆ:

**ಹತ್ತೂ ನಿಟ್ಟಿಗೆ**
**ಹೊತ್ತಿಸಿ ಉರಿಯನು**
**ನಿತ್ತೆನು ನಾ ಕಿತ್ತಡಿಯಾಗಿ**
**ಹತ್ತೂ ಇಟ್ಟಿಗೆ**
**ಹೊತ್ತಿಸಿ ಉರಿಯನು**
**ಕುತ್ತೆನು ನಾ ಮಾಸತಿಯಾಗಿ.**

ತನ್ನ ನಲ್ಲನಿಗಾಗಿ ಎಂತಹ ತ್ಯಾಗಕ್ಕೂ ಸಿದ್ಧವಾದ ಜೀವಶಕ್ತಿಯ ಕಠೋರ ನಿಷ್ಠೆ ಇಲ್ಲಿ ವ್ಯಕ್ತವಾದಾಗಲೂ ನನಸಿನ ಕೋರಿಕೆ ಇನ್ನೂ ಕನಸಾಗಿಯೇ ಉಳಿದಿರುವಂತಿದೆ. 'ಎಲ್ಲಿಂದದ ಏಳಿಕೆ'ಗಾಗಿ ಜೀವಶಕ್ತಿ ಪ್ರಯತ್ನ ಪಡುತ್ತಲೇ ಇದೆ.

ಇನ್ನು ದೇವಶಕ್ತಿಯ ಇಳಿಯುವಿಕೆಗಾಗಿರುವ ಕಾತರ 'ರೋಹಿಣಿ' ಕವಿತೆಯಲ್ಲಿ ಪ್ರೇಮ ಗೀತೆಯ ರೂಪದಲ್ಲಿ ಅಭಿವ್ಯಕ್ತಗೊಂಡಿದೆ. ಇಲ್ಲಿ ಮಾತ್ರ ಸತಿ-ಪತಿ ಭಾವ, ಪತಿ-ಸತಿ ಭಾವವಾಗಿ ಪರಿಣಮಿಸಿದೆ. 'ಇದು ಸೂಫಿ ಕಾವ್ಯ ಪರಂಪರೆಯನ್ನೂ, ಮರುಳ ಶಂಕರ ದೇವನ ವಚನಗಳನ್ನೂ ನೆನಪಿಸುತ್ತದೆ". 'ಕದಾಗಿದಾ ನೂಕಿಕೊಂಡು, ಚಿಲಕಾ ಗಿಲಕಾ ಹಾಕಿಕೊಂಡು' ಅಟ್ಟ ಏರಿ ಒಳಗೆ ಕುಳಿತ ಗೆಳತಿಯನ್ನು ಕೆಳಗಿರುವ ನಲ್ಲ ಕರೆಯುತ್ತಿದ್ದಾನೆ. ಅವನಿಗೆ ಕಾಣುವುದು ಮಾತ್ರ ಮಿಂಚಿನ. ಜರತಾರಿಯ, ಪಾಟ ಮಾಟದ, ಹಣಿಕಿ ಹಾಕುವ, ಮಾಟ- ಮೋಡಿಯ ಕಳ್ಳೀ ಆಟ :

**ನೀ ಕೂತಲ್ಲಿ**
**ಜ್ಯೋತಿಯ ಥಾಳ**
**ನಾ ಕೂತಲ್ಲಿ**
**ಕತ್ತಲೆ ಕಾಳ**
**ಕಂಡೂ ಕಂಡೂ ಕೂತೇ ಕೂತಿ**
**ತಿಳಿದೂ ತಿಳಿದೂ ಹಾಗೇ ಇರತಿ**
**ಅಲ್ಲೇ ಕುಳಿತಿ**
**ಬಾರೇ ಗೆಳತಿ**

ಇಬ್ಬರ ನಡುವಿನ ಅಂತರ ದೂರವಿದ್ದರೂ

**ಬರತೀ ಬರತೀ ಬಂದೇ ಬರತಿ**
**ಎಷ್ಟೊತ್ತಾರೆ ಅಲ್ಲೇ ಇರತಿ**

ಎಂಬ ದೃಢ ವಿಶ್ವಾಸದೊಂದಿಗೆ ಕವಿತೆ ಮುಗಿಯುತ್ತದೆ. ಇದುವರೆಗೆ ಕೇವಲ ನಂಬಿಕೆಯಾಗಿದ್ದ ಅಂತರಂಗದ ಬೆಳಕಿನ ಅನುಭವಕ್ಕೆ ಈಗ ಮಿಂಚು ಕೂಡಿಕೊಂಡಿದೆ.

ಈ ಮಿಂಚು 'ಸಿಡಿಲು' ಆಗಿ ಭೂಮಿಗೆ ಬಿದ್ದಾಗ 'ಅತ್ತ ಇತ್ತ ಅಂಧಕಾರ'. 'ಇಂದ್ರವನದ ಹಣ್ಣು' ಕೆಳಕ್ಕೆ ಬಿದ್ದಾಗ ಒಂದು ಕ್ಷಣ ಲೋಕದ ಮಬ್ಬು ಹರಿದು ದೊಡ್ಡದೊಂದು ಸಪ್ಪಳಾಗಿ ಲೋಕ ಕಕ್ಕಾವಿಕ್ಕಿಯಾಗುತ್ತದೆ. 'ಎಲ್ಲೋ ಬಿದ್ದು ಹೋಗಲಿಲ್ಲ, ಇಲ್ಲೆ ಬಿದ್ದು ತನಗೆ ಇಲ್ಲ'. ಅದನ್ನು ಸ್ವೀಕರಿಸುವ ಅರ್ಹತೆ ಹಾಗೂ ತಡೆದುಕೊಳ್ಳುವ ತಾಕತ್ತು ಈ ಜೀವಕ್ಕೆ ಇನ್ನೂ ಬಂದಿಲ್ಲ. ಬೆಳಕಿನ ಆಕಸ್ಮಿಕ ಬಹಳ ಮಹತ್ವದ ಅನುಭವ. "ಪರಮಾತ್ಮನ ಅಸ್ತಿತ್ವದ ಗುರುತು ಸಿಕ್ಕು, ಮಾಯವಾಗಿ ಹೋದದ್ದರ ಗುರುತು ಇಲ್ಲಿದೆ" ಎಂದು ಕುರ್ತಕೋಟಿಯವರು ಹೇಳಿದರೆ, "ಜೀವಶಕ್ತಿಯ ಮೇಲು ಪಯಣದ ಹಾಗೆ, ದೇವಶಕ್ತಿಯ ಕೆಳ ಪಯಣವೂ ಉತ್ಕಟ ಆನಂದದ ಒಂದು ಕ್ಷಣವನ್ನು ನೀಡಿ, ಆ ಬಳಿಕ ಜೀವ ಜಗತ್ತುಗಳನ್ನು ತಬ್ಬಲಿ ಮಾಡುವದು 'ಸಿಡಿಲು' ಕವಿತೆಯ ಕೇಂದ್ರ ಅನುಭವ" ವೆಂದು ಎಚ್. ಎಚ್. ಶಿವಪ್ರಕಾಶ ಗುರುತಿಸುತ್ತಾರೆ.

'ದೇವತಾ ಪೃಥಿವೀ' ಕವಿತೆಯ ಸಂದರ್ಭ ಆತ್ಮನ ಕಾಳರಾತ್ರಿ (Dark night of the Soul) ಎಂದು ಕರೆದಿರುವ, ಅನುಭಾವ ಕಾವ್ಯದ ಎರಡನೆಯ ಹಂತದ ಕೊನೆ.

**ಮೊಲೆ ಹಾಲು ಸಾಕಮ್ಮ/ಸವಿಲಾಲಿ ಬೇಕಮ್ಮಾ**
**ಏಳಮ್ಮಾ ಮಲಗಿರುವ ತಾಯಿ ಪೃಥಿವೀ**

ಎನ್ನುವಲ್ಲಿ ಪೃಥ್ವಿಯ ದೈವತ್ವ ಮತ್ತು ತಾಯ್ತನಗಳನ್ನು ಒಪ್ಪಿಕೊಂಡ ಕವಿ ತಾಯಿಯಿಂದ ಈ ಮೊದಲು ಪಡೆದ ವಾತ್ಸಲ್ಯಕ್ಕಿಂತ ಮಿಗಿಲಾದ ಕಕ್ಕುಲತೆಯನ್ನು ಪಡೆಯಲು ಹಂಬಲಿಸುವ ಚಿತ್ರ ಇಲ್ಲಿದೆ. ಪಾರಮಾರ್ಥಿಕತೆಯ ಅರಿವಿನಿಂದ 'ಕೇವಲ'ದ ಹಸಿವೆಗೆ ಹಂಬಲಿಸುವ ಒಂದು ಮನಃಸ್ಥಿತಿ ಇದು ಎಂದೂ ಹೇಳಬಹುದು. ತಾಯಿ ಪೃಥಿವಿ ತನ್ನ ರೂಪ, ರಸ, ಗಂಧಗಳಿಂದ ಮಗನ ದೈಹಿಕ ಹಸಿವೆಯನ್ನು ನೀಗಿಸಿದರೂ ಮಾನಸಿಕ ಕಸಿವಿಸಿ ಮತ್ತು ದೈವಿಕತೆಯ ಹಸಿವನ್ನು ಹೆಚ್ಚಿಸಿದೆ :

**ಚಂದರನ ಚೆಲವೀಕಿ/ಇಂದರನ ಹೋಲೀಕಿ**
**ಮೈ ಹೀಂಗ ನಿನ್ನ ಮನ ಹ್ಯಾಂಗ/ ಏಳಮ್ಮಾ**
**ಮಲಗಿರುವ ತಾಯಿ ಪೃಥಿವೀ//**

ಹಿಂದಿನ 'ಕಾರಿರುಳು' ಇಂದಿನ 'ಹೊಂಬಿಸಿಲು', 'ಕತ್ತಲೆಯ ಆ ಸೋಂಕು', 'ಹೂಬಿಸಿಲ ಈ ಮಂಕು', ಕಪ್ಪು-ಬಿಳುಪು, ಕಂಡದ್ದು-ಉಂಡದ್ದು, ಮರೆವು-ಅರಿವು ಈ ದ್ವಂದ್ವಗಳೂ ಕುರುಡಾಗಿವೆ. ತಿಳಿವಳಿಕೆಯ ಕೊರಡು ಕೊನರಿದರೂ 'ಹೂವಾಗಿಯೂ ಹಣ್ಣು ಬಿಡದ', ಕ್ರಿಯೆಯಲ್ಲಿ ಸಫಲಗೊಳ್ಳದ ಈ ಬದುಕಿನ ಕೊರತೆ ನೀಗಿಸಲು ಮಗ ಎಷ್ಟು ಹಲುಬಿದರೂ ತಾಯಿ ಮಲಗಿದ್ದಾಳೆ. 'ಕಾಳನ ಕರಿನಿದ್ದಿ' ಸಾವೇ ಆಗಿರಬಹುದೇ? ಅದಕ್ಕಾಗಿ ಅಂಜಿ ತಟ್ಟಿ ಎಬ್ಬಿಸಲು ನೋಡುತ್ತಾನೆ. ಆದರೆ ಇದು ತಾಯಿ ಅವನ ಜೊತೆ ಆಟವಾಡಲು ಹಾಕಿಕೊಂಡ 'ಮಾರೀಯ ಮುಸುಕು', 'ನಿನಗಾಟ ನನಗೆ ಎದೆಗಿಚ್ಚ'. ಆದರೂ ಅವಳಲ್ಲಿ 'ಅಂದು ಆಗಿಸಬಲ್ಲ, ನೆನೆದು ನಾಟಿಸಬಲ್ಲ' ಕರ್ತೃತ್ವಶಕ್ತಿ ಹುದುಗಿದೆ. ಈಗ ಅವನಿಗೆ ಹೊಳೆದಿದೆ ಇದು ತಾಯಿಯ 'ಹಾಲುನಿದ್ದಿ', 'ಜೇನು ನಿದ್ದಿ', 'ಸಕ್ಕರೆಯ ನಿದ್ದಿ'. ಅವನ್ನೆಲ್ಲ ತೊರೆದು ಆಕೆ ಏಳುವವರೆಗೆ ಜೀವ ಕೇಳದು. ಆಕೆ 'ಕನಸಿನ ಕನ್ನಕ್ಕಿ'. ಆ ಕನಸುಗಳನ್ನು ತನ್ನವಾಗಿಸಿ ಸಿದ್ಧಿ ಪಡೆಯಬಹುದೆಂಬ ಆಸೆ ಈ ಸಾಧಕ-ಮಗನಿಗೆ. ಕೊನೆಯ ನುಡಿಯಲ್ಲಿ 'ಮುದುಡೀದ ಮೊಗ್ಗಿ ಅರಳು'ವುದೆಂಬ, ಅಂದರೆ ಅನುಗ್ರಹದ ಸೂರ್ಯೋದಯವಾಗುವುದೆಂಬ ಹಾರೈಕೆಯಿದೆ. ಮಧುರಚೆನ್ನರು ಆತ್ಮಕಥನದಲ್ಲಿ ಈ ಕೃತಿಯ ಹಿನ್ನೆಲೆ ವಿವರಿಸಿರುವುದನ್ನು ಇಲ್ಲಿ ಗಮನಿಸಬಹುದು. "ಪರ್ಯಾಯದಿಂದ (Indirectly) ಈಶಪ್ರೇರಕತ್ವವನ್ನು ಒಪ್ಪಿಕೊಂಡು ಜೀವವು ಈಗ ತೀರ ಪ್ರತ್ಯಕ್ಷವಾಗಿ (Directly) ಮತ್ತು ಅವಿಚ್ಛಿನ್ನವಾಗಿ ಅದನ್ನು ಅನುಭವಿಸಲೆಳಸುತ್ತಿರುತ್ತದೆ". 'ತಾಯಿ ಪೃಥಿವಿ'ಯನ್ನು 'ದೇವತಾ ಪೃಥಿವಿ'ಯಾಗಿ ಕಾಣುವ ಹೆಬ್ಬಯಕೆಯ ಆರ್ತಭಾವದ ಪ್ರಾರ್ಥನೆಯಂತಿರುವ ಈ ಕವಿತೆ, ಆಳವಾದ ವಾತ್ಸಲ್ಯಾನುಭವದ ಕಾವ್ಯ ಪರಿಣತಿಯ ಪ್ರತಿಮೆಗಳ ಮೂಲಕ ಮಧುರಚೆನ್ನರ ಕಾವ್ಯತಂತ್ರದ ಉತ್ಕೃಷ್ಟ ಉದಾಹರಣೆಯಾಗಿದೆ. ' 'ದೇವತಾ ಪೃಥಿವಿ' ಯಲ್ಲಿಯ ತಾತ್ವಿಕ ಅನುಭವ ಉಂಡ ಊಟದಷ್ಟು ನೈಜವಾಗಿದೆ, ವಾಸ್ತವವಾಗಿದೆ. ಭಾಷೆಗೆ ಪ್ರಾಣಶಕ್ತಿ, ಮಂತ್ರಶಕ್ತಿಗಳೆರಡೂ ಬರುವುದನ್ನು ಇಲ್ಲಿ ಕಾಣಬಹುದು' ಎಂಬ ಕುರ್ತಕೋಟಿಯವರ ಮಾತನ್ನು ಇಲ್ಲಿ ನೆನಯಬಹುದು.

ಈ ಕವಿತೆಯ ಸಂದರ್ಭವನ್ನು ವಚನಕಾರರು ಕರೆದಿರುವ 'ಲಿಂಗವಿಕಳಾವಸ್ಥೆಗೆ' ಹೋಲಿಸಿರುವ ಎಚ್. ಎಸ್. ಶಿವಪ್ರಕಾಶರು 'ಪೃಥಿವೀ' ಮತ್ತು 'ಮಲಗಿರುವ ತಾಯಿ' ಶಬ್ದಗಳಲ್ಲಿ ಯೌಗಿಕ

ಅರ್ಥಗಳೂ ಅಂತರ್ಗತವಾಗಿರುವುದನ್ನು ಸೂಚಿಸುತ್ತ, ತಾಯಿಗೆ 'ಪೃಥ್ವಿ'ತತ್ವವನ್ನೂ, ಪೃಥ್ವಿಗೆ ತಾಯಿತನವನ್ನೂ ಆರೋಪಿಸಲಾಗಿದೆಯೆನ್ನುತ್ತಾರೆ. ಆದರೆ 'ಏಳಮ್ಮಾ'ದಲ್ಲಿ ಅಡಗಿರುವ 'ಏಳು' ಶಬ್ದಕ್ಕೂ ಯೌಗಿಕ ಅರ್ಥಛಾಯೆಯನ್ನು ಹುಡುಕುವುದು ಮಾತ್ರ ದೂರಾನ್ವಯವೆನಿಸುತ್ತದೆ. ಅವರೇ ಹೇಳುವಂತೆ ಹೆಚ್ಚೂ ಕಡಿಮೆ ಇಂಥದೇ ವಸ್ತುವುಳ್ಳ ಬೇಂದ್ರೆಯವರ 'ಮೊದಲಗಿತ್ತಿ', 'ಮನುವಿನ ಮಕ್ಕಳು', 'ಚಿಗರಿಗಂಗಳ ಚೆಲುವಿ' ಕವಿತೆಗಳನ್ನು ಈ ಇಬ್ಬರು ಕವಿಗಳ ಕಾವ್ಯ ಕೌಶಲ ಹಾಗೂ ಕಾವ್ಯತಂತ್ರಗಳ ವ್ಯತ್ಯಾಸವನ್ನು ಕಂಡುಕೊಳ್ಳಲು ಈ ಕವಿತೆಯ ಜೊತೆಗಿಟ್ಟು ನೋಡಬಹುದು. ಇಲ್ಲಿ ಅದು ಅಪ್ರಸ್ತುತ. ಅದೇನೇ ಇದ್ದರೂ 'ದೇವತಾ ಪೃಥಿವೀ' ಮಧುರಚೆನ್ನರ ಕೃತಿಸತಿಯ ಶಿರೋರತ್ನ' ಎಂಬ ಬೇಂದ್ರೆಯವರ ಅಭಿಪ್ರಾಯಕ್ಕೆ ಎರಡು ಮಾತಿಲ್ಲ.

೪

'ದೇವತಾ ಪೃಥಿವೀ'ಯಲ್ಲಿ ತಾಯಿ-ಮಗನ ಸಂಬಂಧದ ರೂಪಕಗಳ ಹೆಣಿಕೆ ಇದ್ದಂತೆ 'ನನ್ನನಲ್ಲ'ದಲ್ಲಿ ಸತಿ-ಪತಿ ಭಾವದ ರೂಪಕ ವಿವಿಧ ಮೈಪಡೆಯುತ್ತ ಆಧ್ಯಾತ್ಮಿಕ ಪ್ರಣಯದ ಎಲ್ಲ ಅವಸ್ಥೆಗಳನ್ನು ಉದ್ದಕ್ಕೂ ಚಿತ್ರಿಸುತ್ತ ಹೋಗುತ್ತದೆ. ಈ ಖಂಡ ಕಾವ್ಯದ ವಸ್ತು ಸ್ವತಃ ಮಧುರಚೆನ್ನರೇ ಆಗಿದ್ದಾರೆ. ಇದು ಅವರ ಹದಿನಾಲ್ಕು ವರ್ಷಗಳ ಮಹತ್ವದ ಸಾಧನೆಯ ಪೂರ್ಣ ಕಥನಗೀತ. ಮೊದಲ ಭಾಗದಲ್ಲಿ ಕವಿಯಲ್ಲಿ ಬೀಜಾಂಕುರವಾದ ದೇವಪ್ರಜ್ಞೆಯ ಹಾಗೂ ದೇವನನ್ನು ಪಡೆಯಬೇಕೆಂಬ ಹಂಬಲದ ಚಿತ್ರಣವಿದೆ.

**ಹನ್ನೆರಡು ತುಂಬಿಲ್ಲ ಕನ್ನಕ್ಕಿ ನಾನಂದು**
**ನನ್ನ ನಲ್ಲನ ಕತೆಗೆ ಮರುಳುಗೊಂಡೆ.**
**ಇನ್ನೇನು ಹೇಳುವೆನು ಇಂದಿಗಿಪ್ಪತ್ತಾರು**
**ಈಸೊಂದು ದಿನ ಕೊರಗಿ ಗೊತ್ತುಗಂಡೆ.**
**... .... ..... ...... ..... ......**
**ಹರೆಯ ಬಾರದ ಮುನ್ನ ಹಾಗೂ ಹೀಗೂ ಇದ್ದೆ**
**ಕರುಳು ಹಸಿಯದ ಮುನ್ನ ಕೆರಳದಿದ್ದೆ.**

ಆದರೆ ಈಗ, ಜಗತ್ತಿನಲ್ಲಿ ನಡೆದಿರುವ ನಿರಂತರ ಪ್ರಣಯಲೀಲೆ ತನ್ನ ಅರಿವಿಗೆ ಬಂದ ಮೇಲೆ ಹೊಸ ಆಶೆಗಳ ಕೆರಳುವಿಕೆ ; ತಾಳಲಾರದ ವಿರಹ ಯಾತನೆ:

**ದೇವರಾಯನ ಹೆಸರನೇಕೆ ಕೇಳಿದೆನಮ್ಮಾ**
**ನಾನೇಕೆ ನಂಜು ನುಂಗಿದೆನೆ ತಾಯೀ**
**ಯಾವ ಕಡೆಗೂ ಮುಗ್ಗಲೂರಗುಡದಮ್ಮಯ್ಯ**
**ಈ ನೋವ ನಾ ತಾಳಲೆಂತೆ ತಾಯೀ.**

ನಲ್ಲನಿಗಾಗಿ (ದೇವರಾಯ) ಹಲುಬಿ, ಹಂಬಲಿಸಿ ಹೊಲಬುಗೆಟ್ಟ ಸ್ಥಿತಿಯ ತೀವ್ರತೆ ಕಾವ್ಯದ ಮೊದಲ ಭಾಗದ ನುಡಿ ನುಡಿಯಲ್ಲೂ ಕಿಡಿಗೊಂಡಿದೆ. ಆದರೂ

**ಬರುವುದೇನುಂಟೊಮ್ಮೆ ಬರುವ ಕಾಲಕೆ ಬಹುದು**
**ಬಯಕೆ ಬರುವುದರ ಕಣ್ಸನ್ನೆ ಕಾಣೊ**

ಎಂದು ತನಗೆ ತಾನೇ ಸಮಾಧಾನ ತಂದುಕೊಳ್ಳುತ್ತದೆ ಜೀವ.

ಎರಡನೆ ಭಾಗದಲ್ಲಿ ನಲ್ಲನ ಶೋಧನೆ ಪ್ರಾರಂಭವಾಗುತ್ತದೆ. ಯಾರನ್ನು ಕೇಳಿದರೂ ಸರಿಯಾದ ಉತ್ತರ ಸಿಗದೆ ತಳಮಳಗೊಂಡು ಅತೃಪ್ತಿಯನ್ನೇ ಹೆಚ್ಚಿಸಿಕೊಂಡು, ನೆಲೆ ಕಾಣದೆ

**ನನ್ನರಸ ನನ್ನೊಡೆಯ ನನ್ನ ಜೀವದ ಜೀವ**
**ನನ್ನ ಮೊರೆಯಿನ್ನಾರು ಕೇಳಬಹುದೋ**

ಎಂಬ ಅಸಹಾಯಕತೆಯ ಸ್ಥಿತಿಯ ದಾರುಣತೆ ಇಲ್ಲಿದೆ.

ಮಾನವರಿಂದಂತೂ ಸಮರ್ಪಕ ಉತ್ತರ ದೊರೆಯಲಿಲ್ಲ. ಪ್ರಕೃತಿಯನ್ನಾದರೂ ಕೇಳಿನೋಡಬೇಕು. ಪ್ರಕೃತಿಯೆಲ್ಲ ಪರಮಾತ್ಮನ ಸೃಷ್ಟಿ. ಅಲ್ಲಿಯೂ ದೈವಿಕತೆ ತುಂಬಿ ನಿಂತಿದೆ. ಎಲ್ಲಕ್ಕೂ ಹೆಚ್ಚಾಗಿ ಇಂಥ ಅಗಾಧವಾದ ಸೃಷ್ಟಿಯನ್ನು ನಿರ್ಮಿಸಿದ ಪ್ರಭು ಅವುಗಳಿಗೆ ಗೊತ್ತಿರದೆ ಇರಲಿಕ್ಕಿಲ್ಲವೆಂಬ ಭಾವನೆ ಒಂದು ತನ್ಮಯತೆಯಲ್ಲಿ ಮೂಡುವಂತಹದು. ಇಷ್ಟೇ ಅಲ್ಲ, ಇಂಥ ಸುಂದರ ಸೃಷ್ಟಿಯನ್ನು ನಿರ್ಮಿಸಿದ ಆ 'ಚೆಲುವ ಚೆನ್ನಿಗರಾಯ' ಹೇಗಿರಬಲ್ಲ ಎಂಬ ರೋಮಾಂಚಕ ಕುತೂಹಲ ಕೆರಳುತ್ತದೆ. ಅಕ್ಕಮಹಾದೇವಿ ಒಂದು ಅವಸ್ಥೆಯಲ್ಲಿ "ಅಳಿಸಂಕುಳವೆ, ಮಾಮರವೆ, ಬೆಳುದಿಂಗಳೆ, ಕೋಗಿಲೆಯೆ ನಿಮ್ಮೆಲ್ಲರನು ಒಂದ ಬೇಡುವೆನು. ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕರೆದು ತೋರಿರೆ' ಎಂದು ಕೇಳಿಕೊಂಡಂತಹ ಆರ್ತಭಾವವೇ ಈ ಕವಿಯದೂ.

**ನಿಲ್ಲು ನಿಲ್ಲೆಲೆ ನವಿಲೆ, ನಿನ್ನ ಕಣ್ಣುಗಳೇಸು**
**ಕಣ್ಣ ಬಣ್ಣಗಳೇಸು ಎಣಿಸಲಾರೆ!**
**ಎಲ್ಲ ರೂಪಿಸಿದವನು ಎಲ್ಲಿ ತಾನಡಗಿಹನೆ**
**ತಾಳಲಾರದು ಜೀವ ಹೇಳಬಾರೇ. (೩-೧)**

* * *

**ಬೆಳದಿಂಗಳಿರುಳಲ್ಲಿ ನಟ್ಟ ನಡುರಾತ್ರಿಯಲಿ**
**ಸಪ್ಪಳಿಲ್ಲದ ಗಪ್ಪುಗಾರಿನಲ್ಲಿ**
**ಕೊಳದ ಬಾಂದಳದಲ್ಲಿ ಟಿಂವ್ ಗುಡುವ ಟೀಂಪಕ್ಕಿ**
**ನೀನಾರೆ ಬಲ್ಲೆಯಾ ನಲ್ಲನೆಲ್ಲಿ (೩-೬)**

ಹೀಗೆಯೇ ಆರದಾರತಿ ಹಿಡಿದ ಹೊನ್ನಿ, ನುಣ್ಣದನಿಯ ಕೋಗಿಲೆ, ಮಾಣಿಕದ ಮೂಗಿನ ಗಿಣಿರಾಮ, ಬಿರುಗಣ್ಣಮಲ್ಲಿಗೆಗಳಲ್ಲದೆ ಸರ್ವಾಧಾರೆ ಭೂದೇವಿ,ಎಲ್ಲಿಯೂ ಮುಗಿಯದಾಕಾಶ ತಂದೆ, ಕಾಲನಟ, ಚಿಕ್ಕೆ, ಸೂರ್ಯ, ಚಂದ್ರ -ಮುಂತಾದವುಗಳಲ್ಲೆಲ್ಲ ದೇವನ ಅಂಶ ಹಾಗೂ ಕಾಂತಿಯನ್ನು, ಶಕ್ತಿಯನ್ನು ಕಂಡು ಕಲ್ಲುಕರಗುವಂತೆ ಕಣ್ಣೀರಿಟ್ಟು, ಬನವೆಲ್ಲ ಬಾಡುವಂತೆ ನಿಟ್ಟುಸಿರಿಟ್ಟು ಆರ್ತತೆಯಿಂದ ದುಂಬಾಲು ಬಿದ್ದು ದೇವನನ್ನು ಹುಡುಕುವ ಪ್ರಯತ್ನವೇ ಇಲ್ಲಿ ಪ್ರಮುಖವಾಗಿದೆ. ಒಳಜಗತ್ತಿನ ಕಾಳಜಿಗಳನ್ನೆಲ್ಲ ಹೊರಜಗತ್ತಿನ ಆಗು-ಹೋಗುಗಳಲ್ಲಿ ಲೀನಗೊಳಿಸಲಾಗಿದೆ. ವಿಪ್ರ ಲಂಬ ಶೃಂಗಾರದ ವಿರಹಿಣಿಯ ಆರ್ತನಾದದಂತೆ ಕವಿಯ ಆರ್ತಭಾವ ಒಂದು ಸ್ರೋತವಾಗಿ ಹರಿದು ನಮ್ಮ ಅಂತಃಕರಣವನ್ನು ಕಲಕುತ್ತದೆ.

ನಾಲ್ಕನೆಯ ಭಾಗ ದಿವ್ಯಾನುಭವದ ಪ್ರತೀತಿಯನ್ನು ಪಡೆದ ಅನಂತ ಸ್ರೋತ:

ತುಂಬಿ ಬಂದಿತು ಕಾಂತಿ, ತುಂಬಿ ಬಂದಿತು ಶಾಂತಿ
ತುಂಬಿ ದ್ಯಾವಾ ಪೃಥಿವಿ, ಜೀವ ತುಂಬಿ
ತುಂಬಿ ತುಳುಕಿತು ಪೊಳ್ಳು, ತುಂಬಿ ತುಳುಕಿತು ಜೊಳ್ಳು
ಜಡದೊಡಲ ಜಗಜೀವ ಜ್ಯೋತಿ ತುಂಬಿ (೪-೩)
ನಿಶ್ಯಬ್ಧ ನಿಶ್ಯಬ್ದ ಶಬ್ದದಾಚೆಯ ಶಬ್ದ
ನಿಶ್ಯಬ್ಧವೆಂದರೂ ಮೌನವಲ್ಲ.
ನಿಸ್ಸೀಮ ನಿಸ್ಸೀಮ ಸೀಮದಲೆ ನಿಸ್ಸೀಮ
ನಿಸ್ಸೀಮವೆಂದರೂ ಶೂನ್ಯವಲ್ಲ (೪-೪)
ಜಗದ ಜೀವವೆ ದೇವ, ಜಗವೆ ದೇವನ ದೇಹ
ಜೀವವಿರದಲ್ಲಿ ಜೀವನದ ಸೆಲೆಯೆ?
ಜಗದಾತ್ಮ ಜಗದೀಶ ಆತ್ಮಗಳ ಮೂಲಾತ್ಮ
ಪರಮಾತ್ಮ ನಿನಗೊಂದು ಬೇರೆ ನೆಲೆಯೇ? (೪-೧೮)

ಎಂಬ ಐಕ್ಯಾನುಭವ ತಲುಪಿದ ಸ್ಥಿತಿ ; ಎತ್ತೆತ್ತಲೂ ದಿವ್ಯಸ್ಪರ್ಶದ ರೋಮಾಂಚನ. "ಶಬ್ದಗಳ ಮೂಲಕ ನಿಶ್ಯಬ್ದ ಲೋಕಕ್ಕೆ, ಇಂದ್ರಿಯಗಳ ಮೂಲಕ ಅತೀಂದ್ರಿಯ ಜಗತ್ತಿಗೆ ದಾಳಿ ಇಕ್ಕುವ ಕಾವ್ಯ ಪ್ರತಿಭೆ " ಇಲ್ಲಿ ತಂತಾನೆ ವಿಜೃಂಭಿಸಿದೆ.

ಕಾವ್ಯದ ಐದನೆಯ ಹಾಗೂ ಕೊನೆಯ ಭಾಗ ಕವಿಯ ಧನ್ಯತೆಯ ಕುರುಹಾಗಿದೆ. ಇದು ಓದು -ವಾದ, ಶಕ್ತಿ-ಯುಕ್ತಿಗಳೆಲ್ಲ ಮುಗಿದು ನಿಜ ನಿಂತ ಭಾವಮುಕ್ತಿಸ್ಥಲ. ಭಾವ -ಬುದ್ಧಿಗಳು ಒಂದಾಗುವುದೇ ಜೀವನದ ಜೀವಾಳವೆಂಬ ದರ್ಶನ. ಅನೇಕ ದಿನಗಳ ನಂತರ, ಅನೇಕ ಕಷ್ಟಗಳನ್ನು ಅನುಭವಿಸಿದ ತರುವಾಯ 'ತಲೆಯ ಮೇಲಿನ ಗುಡ್ಡ ಕೆಳಗೆ ತಾನಿಳಿದು' ಪಡೆದ ಸಿದ್ಧಿಯನ್ನು ಅಮಿತಾನಂದದಿಂದ ಸ್ಮರಿಸಿಕೊಳ್ಳುವುದೂ ಇಲ್ಲಿ ನಡೆದಿದೆ. ಇಂಥ ತೂರ್ಯಾವಸ್ಥೆಯ ನಂತರ ಮುಂದೇನು?

ತಂದೆ ನೀ ಕಣ್ತೆರೆದರಂದಿಗರುಣೋದಯವು
ಮುಂದೆ ಸೂರ್ಯೋದಯದ ಚಿಂತೆಯಿಲ್ಲ.

ಆ ಸೀಮೆಯನ್ನು ದಾಟಿದರೆ ಮುಂದೆ ಇರುವುದೇ ದೇವನ ದಿವ್ಯ ರಾಜ್ಯ. ಅದಕ್ಕೆ 'ಕೈ ಮುಗಿದು ಶರಣು ಶರಣೆಂಬುದಯ್ಯಾ'.

ಆತ್ಮ ಯಾತ್ರೆಯ ಎಲ್ಲ ಹಂತಗಳನ್ನು ಇಷ್ಟೊಂದು ಕಲಾತ್ಮಕವಾಗಿ ಕಾವ್ಯವನ್ನಾಗಿಸಿದ ಮೇಲೆ ಅದು ಮುಗಿಯಿತೆಂದು ನಾವು ಭಾವಿಸಬಹುದೆ? 'ಮಧುರ ಗೀತ'ದಲ್ಲಿ ಅದಕ್ಕೆ ಉತ್ತರವಿದೆ.

ಅನ್ನಬಹುದೇನಯ್ಯ ಹಾಡು ಮುಗಿಯಿತ್ತೆಂದು
ಜನ್ಮದಾಕಾಶದಲ್ಲದರ ಬೇರು,
''ಕನ್ನಡಿಯೊಳೆಷ್ಟು ಕಂಡೀತು ಕನಕಾಚಲವು
ಕೊಡಕೆ ಹಿಡಿಸೀತೆಷ್ಟು ಕಡಲ ನೀರು'' (೫-೧೬)

೫

'ನನ್ನ ನಲ್ಲ'ನಿಗೆ ಕಣ್ಸನ್ನೆ ಮಾಡಿದ 'ಮಧುರ ಗೀತ', ಆ ಕಾವ್ಯಕ್ಕೆ ನೀಡಿದ ಪೂರ್ವ ಸೂಚನೆಯಾಗಿದೆ. ಎರಡೂ ಖಂಡ ಕಾವ್ಯಗಳು ಅವಳಿ -ಜವಳಿಯಂತೆ ಕಂಗೊಳಿಸುತ್ತವೆ. 'ನನ್ನ ನಲ್ಲ'ದ ಆತ್ಮಯೋಗದ ಹಾದಿಯಲ್ಲಿಯ 'ಸಖ್ಯ ಯೋಗ' 'ಮಧುರ ಗೀತ'ವಾಗಿ ನಿನದಿಸಿದೆ. ದೇವರಾಯನನ್ನು ಕಾಣುವ ತೀವ್ರವಾದ ಆಧ್ಯಾತ್ಮಿಕ ಹಂಬಲದ ಹಾಡು-ಪಾಡು 'ನನ್ನ ನಲ್ಲ'ವಾದರೆ, ಇದೇ ಹಾದಿಯಲ್ಲಿ ಸಾಗಿದಾಗ, ದೇವರಾಯನ ಸುಳಿವು ಕಾಣದಾಗಲು ಒದಗಿದ ಸಂಕಟದ ಸ್ಥಿತಿಯಲ್ಲಿ 'ಒಳಧುಮುಕಿ ಏಕರಸವಾಗಿ ಬೆರೆತ 'ಗೆಳೆಯನನ್ನು ಕುರಿತ ಆತ್ಮಕಥನ 'ಮಧುರ ಗೀತ'ದ ವಸ್ತುವಾಗಿದೆ. ಛಂದಸ್ಸು, ಧಾಟಿ, ಶೈಲಿ ಎರಡಕ್ಕೂ ಸಮಾನವಾಗಿದ್ದು ಎರಡರ ಜೀವಾಳದಲ್ಲಿಯೂ ಬಹುಮಟ್ಟಿನ ಸಾಮ್ಯವಿದೆ.

**ಬರುವದೇಸುಂಟೊಮ್ಮೆ ಬರುವ ಕಾಲಕೆ ಬಹುದು**
**ಬಯಕೆ ಬರುವುದರ ಕಣ್ಸನ್ನೆ ಕಾಣೊ**

ಎಂಬುದು 'ನನ್ನನಲ್ಲ'ದ ಸೂತ್ರವಾದರೆ ;

**ಯಾವುದೇನೇ ಇರಲಿ, ಪ್ರೀತಿಯಂಥಾ ವಸ್ತು**
**ಭವದಲ್ಲಿ ಕಾಣೆ ಮನಗಂಡ ಮಾತು**

ಎಂಬುದು 'ಮಧುರ ಗೀತ'ದ ಸೂತ್ರವೂ ಸಿದ್ಧಾಂತವೂ ಆಗಿದೆ. ಎರಡೂ ಕಾವ್ಯಗಳ ಐದೂ ಭಾಗಗಳ ಕೊನೆಯ ನುಡಿಗಳಾಗಿ ಇವು ಅನುರಣನಗೊಂಡಿವೆ.

**ಭಾವಕೊಲಿಯದ ಬುದ್ಧಿ, ಬುದ್ಧಿಗೊಲಿಯದ ಭಾವ**
**ಇಲ್ಲೆ ಕಾಣಯ್ಯ ಸಂದೇಹ ಸೂತ್ರ**

ಎಂಬ ಅರಿವಿನ ಸೂಚನೆ 'ನನ್ನ ನಲ್ಲ'ದಲ್ಲಿ ಇದ್ದರೆ ;

**ಅನಿಸಿದಷ್ಟೂ ಮಾತು ಎಣಿಸಿ ಹೇಳಲು ಬರದು**
**ಬುದ್ಧಿಗಿದು ಎಂದಿಗೂ ಕುಂಟುತನವು**

ಎಂದು 'ಮಧುರ ಗೀತ'ದಲ್ಲಿ ನೇರವಾಗಿಯೇ ನಿರೂಪಿಸಲಾಗಿದೆ.

ಒಂದು ದೃಷ್ಟಿಯಲ್ಲಿ ಇವೆರಡೂ ಕಾವ್ಯಗಳು ಭಾವ-ಬುದ್ಧಿಯ ಹೋರಾಟದಲ್ಲಿಯೇ ಹುಟ್ಟಿಕೊಂಡಂತೆಯೂ ಕಾಣಬಹುದು. ಭಾವಲೋಕದಿಂದ ಅನುಭಾವಲೋಕಕ್ಕೆ ಸಮರ್ಥವಾಗಿ ಕೊಂಡೊಯ್ಯುವ ಶೈಲಿಯ ಉತ್ಕಟತೆಯನ್ನು ಎರಡರಲ್ಲಿಯೂ ಕಾಣುತ್ತೇವೆ :

**ತುಟಿಗೆ ತುಟಿಹಚ್ಚಿ ನಾವಾತ್ಮರುಚಿ ನೋಡಿದೆವು**
**ಎದೆಗೆ ಎದೆ ಹಚ್ಚಿ ತೆರೆ ಹಾರಿಸಿದೆವು**
**ಗುಟು ಗುಟುಕು ಹೀರಿದೆವು ತಲೆಯ ಕಮಲದ ಗಂಧ**
**ನೋಡ ನೋಡುತ ಕಾಲ ಖಂಡಿಸಿದೆವು**

(ಮಧುರ ಗೀ : ೫-೨)

**ಬಂತು ಬಂತೆಲೆ ಬಂತು, ಬಂತು ಘನಸಿರಿ ಬಂತು**
**ಬಂತೆಂದರೂ ಇದ್ದುದಿದ್ದೆ ಇತ್ತು!**

ಬಂತು ಬೆಳಗೆಂಬಂತೆ, ಬಂತು ಹೊಳೆ ಬಂದಂತೆ
ಇದ್ದದ್ದೆ ತುಂಬಿ ತುಳು ತುಳುಕುತಿತ್ತು.

(ನನ್ನ ನಲ್ಲ : ೪-೨)

ಹೀಗೆ ಮಧುರಚೆನ್ನರ ಕಾವ್ಯ ಕನ್ನಡ ಅನುಭಾವ ಕಾವ್ಯದ ಪರಂಪರೆಯಲ್ಲಿ ಸ್ವಪ್ರತೀತಿಯನ್ನು ಪಡೆದ ಅನುಪಮ ಕಾಣಿಕೆಯಾಗಿದೆ.

ಶಿವಶರಣರು ತಮ್ಮ ವಚನಗಳ ಮೂಲಕ ಭಾಷೆಗೆ ಅನುಭಾವದ ಭಾಷಿಕ ರೂಪಗಳನ್ನು ನಿರ್ಮಿಸಿ ಕೊಟ್ಟನಂತರ ಅದಕ್ಕ ಸರಿದೂಗುವ ಕೃತಿ ಮಧುರಚೆನ್ನರ 'ನನ್ನ ನಲ್ಲ' ಗೀತವೆಂದರೆ ತಪ್ಪಾಗದು. ಕಾವ್ಯ ನಿರ್ಮಾಣವನ್ನು ಬೇಂದ್ರೆಯವರು 'ಗೀತೆ'ಯ 'ಕರ್ಮಸು ಕೌಶಲಂ' ಎಂಬ ಅರ್ಥದಲ್ಲಿ 'ಕಾವ್ಯ ಯೋಗ' ಎಂದು ಕರೆದಿದ್ದಾರೆ. ಆದರೆ ಮಧುರಚೆನ್ನರ ಕಾವ್ಯಯೋಗ ಇನ್ನೊಂದು ರೀತಿಯದು. ಇಲ್ಲಿ ಕಾವ್ಯದ ಸೃಷ್ಟಿಕ್ರಮಕ್ಕಿಂತ ಅರ್ಥಗಳ ನಿಗೂಢತೆ ಹಾಗೂ ಅನುಭಾವದ ಪ್ರಕ್ರಿಯೆ ಮುಖ್ಯವಾಗುತ್ತದೆ. ಆಧ್ಯಾತ್ಮಿಕತೆ ಬೇಂದ್ರೆಯವರ ಬದುಕನ್ನೇ ಆವರಿಸಿದ್ದರೂ ಮಧುರಚೆನ್ನರಂತೆ ಅವರು ಸಾಧನೆಯ ಹಾದಿ ಹಿಡಿದವರಲ್ಲ. ಇವರಿಬ್ಬರ ಸ್ನೇಹಸಂಬಂಧ ಅತ್ಯಂತ ಗಾಢವಾದದ್ದು. ಇಬ್ಬರೂ ಅರವಿಂದರ ಪ್ರಭಾವಕ್ಕೆ ಒಳಗಾಗಿದ್ದರೂ ಸ್ವಂತದ ಆಧ್ಯಾತ್ಮಿಕತೆಯನ್ನು ರೂಪಿಸಿಕೊಂಡವರು. "ಆದರೆ ಅನುಭಾವ ಬೇಂದ್ರೆ ಕಾವ್ಯದ ಒಂದು ಸತ್ವವಾಗಿದ್ದರೆ ಮಧುರಚೆನ್ನರ ಕಾವ್ಯದಲ್ಲಿ ಅನುಭಾವವನ್ನು ಬಿಟ್ಟರೆ ಬೇರೇನೂ ಇಲ್ಲ".೭ ಸಂಕೀರ್ಣತೆಯ ಸಹಜ ಪ್ರವೃತ್ತಿಯಿಂದಾಗಿ ಬೇಂದ್ರೆಯವರ ಅನುಭಾವಿಕ ಕವಿತೆಗಳು ಕಟ್ಟಿಕೊಡುವ ಅನುಭವದ ಸ್ವರೂಪವನ್ನು ಗ್ರಹಿಸುವುದು ಅಷ್ಟೊಂದು ಸುಲಭವಾಗಿಲ್ಲ. ಅವರ ಕಾವ್ಯ ರಚನಾ ತಂತ್ರವೇ ಬೇರೆ ಬಗೆಯ ವಾಗ್‌ವೈಭವದಿಂದ ಕೂಡಿದ್ದು. ಈ ಹಿನ್ನೆಲೆಯಿಂದ ಅವರ ಕವಿತೆಗಳ ಝಗಮಗಿಸುವ ರತ್ನಾಭರಣಗಳ ಬೆಳಕಿನಲ್ಲಿ ಅನುಭಾವ ಸುಂದರಿಯು ಮರೆಯಾಗಿ ಬಿಡುತ್ತಾಳೆ"೮ ಎಂದಿದ್ದಾರೆ ಡಾ. ಎಚ್. ಎಸ್. ರಾಘವೇಂದ್ರರಾವ್. ಆದರೆ ಮಧುರ ಚೆನ್ನರ ಅನುಭಾವ ಕವಿತೆ ನಿರಾಭರಣ ಸುಂದರಿ. ದೈವದ ಹುಚ್ಚು ಹಿಡಿದು ಯಾವ ಮುಚ್ಚು ಮರೆಯೂ ಇಲ್ಲದೆ 'ಅಚ್ಚ ಅನುಭವ ರಾಶಿ ಬಿಚ್ಚಿ ಬೈಲಿಗೆ ಇಟ್ಟ' ರೀತಿ ಅವರದು. ಬಹುಶಃ ಇದನ್ನು ಗಮನಿಸಿಯೇ ಬೇಂದ್ರೆಯವರು,

ನನ್ನ ನಿನ್ನ ಚೆನ್ನ ಬಳಿ ವಿಶಾಲ ವೃಕ್ಷ ಬೆಳೆದಿದೆ
... ... ... ... ... ... ...
ನನ್ನ ನಿನ್ನ ನೋಟ ಮಾತ್ರ ಎರಡು ದಿಕ್ಕಿಗೆಳೆದಿದೆ
ಬೇರೆ ಹಾದಿ ತುಳಿದಿದೆ

ಎಂದಿದ್ದಾರೆ. ಒಂದು ಭಕ್ತಿ, ಸಾಧನೆಗಳ ಹಾದಿಯಾದರೆ ಇನ್ನೊಂದು ಜ್ಞಾನ ಅಧ್ಯಯನಗಳ ಹಾದಿ.

ಕನ್ನಡ ಪರಂಪರೆಯಲ್ಲಿಯೇ ವಿಶಿಷ್ಟವಾದ ಹಾಗೂ ಪ್ರತಿಭಾವಂತ ಕವಿಗಳಲ್ಲೊಬ್ಬರಾದ ಮಧುರಚೆನ್ನರ ಅನುಭಾವ ಕಾವ್ಯದ ವಿಶಿಷ್ಟ ಅಂಶಗಳನ್ನು, ಎಚ್. ಎಸ್. ಶಿವಪ್ರಕಾಶರು ಗುರುತಿಸುವಂತೆ, ಹೀಗೆ ಸಂಗ್ರಹಿಸಿ ಹೇಳಬಹುದು :

೧. ಮಧುರ ಚೆನ್ನರ ಕಾವ್ಯಯೋಗ ಮಿತವಾದ ವಿವರಗಳ ಮೂಲಕ ದ್ವಂದ್ವಗಳನ್ನು ಸೂಚಿಸಿ ಅದರಾಚೆಗಿನ ಜಂಗಮ ಸಮತೋಲನವನ್ನು ಸಾಧಿಸುತ್ತದೆ.

೨. ಇತರ ಎಲ್ಲ ಕವಿತೆಗಳಲ್ಲಿಯೂ ಕೇಂದ್ರ ಪಾತ್ರಗಳು ಎರಡೇ. ಕೆಲವು ಸಲ ಈ ಪಾತ್ರಗಳು ಶಕ್ತಿಗಳಾಗಿ ಮಾರ್ಪಡುತ್ತವೆ. (ಜೀವಶಕ್ತಿ-ದೇವಶಕ್ತಿ)

೩. ಜೀವ-ಜಗದೀಶರ ಪ್ರೇಮ ದರ್ಶನವನ್ನು ಕೇಂದ್ರವನ್ನಾಗಿಸಿಕೊಂಡ ಕವಿತೆಗಳಲ್ಲಿ ಜೀವ-ಪ್ರಕೃತಿಗಳಲ್ಲಿರುವ ಶಕ್ತಿಯ ಏಳಿಕೆ ಪ್ರಧಾನ ಆಶಯವಾಗಿಯೂ ದೈವೀಶಕ್ತಿಯ ಇಳಿಯುವಿಕೆ ಅಧೀನ ಆಶಯವಾಗಿಯೂ ಕೆಲಸ ಮಾಡಿವೆ.

೪. ಇವರ ಕಾವ್ಯದಲ್ಲಿ ಜನಪದದ ಸಹಜತೆಯೂ, ಭಕ್ತಿ ಕಾವ್ಯದ ಉತ್ಕಟತೆಯೂ, ಮಹಾಕಾವ್ಯ ಪರಂಪರೆಯ ಸಂಯಮವೂ ಮುಪ್ಪುರಿಗೊಂಡಿವೆ.

೫. ಅನುಭಾವ ಕಾವ್ಯ ಪರಂಪರೆಗೆ ಇವರ ಕಾವ್ಯ ಹಿಂದೆಂಗಿಂತಲೂ ಹೆಚ್ಚಿನ ಸರಳತೆ ಮತ್ತು ಸ್ಪಷ್ಟತೆಯನ್ನು ತಂದುಕೊಟ್ಟಿದೆ.

೬. ನಮ್ಮ ಪರಂಪರೆಯಲ್ಲಿ ಈ ಹಿಂದೆ ಮತಪಂಥಗಳ ಸಾಂಕೇತಿಕತೆ ಮತ್ತು ಪರಿಕಲ್ಪನೆಗಳ ಮೂಲಕ ಮೈದಾಳುತ್ತಿದ್ದ ಅನುಭಾವೀ ಕಾವ್ಯದ ಅಭಿವ್ಯಕ್ತಿಯನ್ನು ಮಾನವ ಲೋಕದ ಇಂದ್ರಿಯ ಗ್ರಾಹ್ಯ ಮೂಲಭೂತ ವಿವರಗಳ ಮೂಲಕವೇ ಯಶಸ್ವಿಯಾಗಿ ಅಭಿವ್ಯಕ್ತಿಸಿ ಅನುಭಾವೀ ಕಾವ್ಯದ ಭಾಷೆಯನ್ನು ಸ್ವಚ್ಛಗೊಳಿಸಿದೆ.

೭. ಇವರ ಕಾವ್ಯ ಎಲ್ಲಾ ಮತಧರ್ಮ ಸಂಕೇತಗಳಿಂದ ಅನುಭಾವವನ್ನು ಮುಕ್ತವಾಗಿಸಿದೆ. ನಮ್ಮ ಧರ್ಮನಿರಪೇಕ್ಷ ಯುಗದಲ್ಲಿ ಇದೊಂದು ದೊಡ್ಡ ಸಾಧನೆ.

## ಅಡಿಟಿಪ್ಪಣಿಗಳು :


೧. 'ಆತ್ಮಶೋಧ' ೧೯೮೮, ಸಂ. ಡಾ. ಗುರುಲಿಂಗ ಕಾಪಸೆ, ಚೆನ್ನಬಸವ ಪ್ರಕಾಶನ ಹಲಸಂಗಿ

೨. 'ಮಧುರಚೆನ್ನ' ೧೯೮೮, ಚೆನ್ನವೀರ ಕಣವಿ, ಪುಟ : ೨೩

೩. 'ನೂರುಮರ ನೂರು ಸ್ವರ' ಕೀರ್ತಿನಾಥ ಕುರ್ತಕೋಟಿ, ೧೯೮೮, ಪುಟ : ೧೭೨

೪. 'ಆಧುನಿಕ ಕನ್ನಡ ಕಾವ್ಯ : ಉತ್ತರ ಕರ್ನಾಟಕದ ಕೊಡುಗೆ ' ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೮೯ ಪುಟ :೩೭

೫. 'ನಡೆದು ಬಂದ ದಾರಿ' ಕೀರ್ತಿನಾಥ ಕುರ್ತಕೋಟಿ, ೧೯೫೫. ಪುಟ : ೬೨

೬. 'ಆಧುನಿಕ ಕನ್ನಡ ಕಾವ್ಯ : ಉತ್ತರ ಕರ್ನಾಟಕದ ಕೊಡುಗೆ ' ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೮೯ ಪುಟ : ೧೪೦

೭. 'ನೂರುಮರ ನೂರು ಸ್ವರ' ಕೀರ್ತಿನಾಥ ಕುರ್ತಕೋಟಿ, ೧೯೮೮, ಪುಟ : ೧೭೧

೮. 'ಹಾಡೆ ಹಾದಿಯ ತೋರಿತು ' ಎಚ್. ಎಸ್. ರಾಘುವೇಂದ್ರರಾವ್, ೧೯೯೫, ಪುಟ : ೩೪೧

೯. 'ಆಧುನಿಕ ಕನ್ನಡ ಕಾವ್ಯ : ಉತ್ತರ ಕರ್ನಾಟಕದ ಕೊಡುಗೆ ' ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೮೯ ಪುಟ : ೪೭


'ಸಂವಾದ' ತ್ರೈಮಾಸಿಕ ೫೧,

೧೯೯೯

# ಜೋಳದರಾಶಿಯವರ ಎರಡು ಕಾವ್ಯ ಸಂಗ್ರಹಗಳು

ಶ್ರೀ ಜೋಳದರಾಶಿ ದೊಡ್ಡನಗೌಡರು ನಮ್ಮ ನಾಡಿನ ಶ್ರೇಷ್ಠ ಗಮಕಿ ಹಾಗೂ ನಟರಾಗಿರುವಂತೆಯೇ ಸ್ವತಃ ನಾಟಕಕಾರ ಹಾಗೂ ಕವಿಯಾಗಿರುವದು ಅವರ ವ್ಯಕ್ತಿತ್ವಕ್ಕೆ ಹೆಚ್ಚಿನ ಕಳೆಯನ್ನು ತಂದುಕೊಟ್ಟಿವೆ. ೧೯೫೩ರಲ್ಲಿ ಪ್ರಕಟವಾದ ಅವರ 'ರಸವರ್ಷ', ೧೯೭೭ರಲ್ಲಿ ಪ್ರಕಟವಾದ 'ಗೌಡತಿ ಬರಲಿಲ್ಲ'- ಈ ಎರಡು ಕಾವ್ಯಗಳ ಅವಲೋಕನ ಈ ಲೇಖನದ ಉದ್ದೇಶವಾಗಿದೆ.

'ರಸವರ್ಷ' ನೂರೊಂದು ಗೀತೆಗಳ ಗುಚ್ಛ. 'ಯಾವುದೋ ಮಧುರ ವೇದನೆಯು ಹೃದಯದಲ್ಲಿ ಸುಳಿದ ಮೇಲೆದ್ದಾಗ ರಾಗದಿಂದ ಗುನುಗುಟ್ಟಿ ಹಾಡಿಕೊಂಡ ಭಾವಗೀತೆಗಳು' ಎಂಬುದಾಗಿ 'ನಿವೇದನೆ'ಯಲ್ಲಿ ಕವಿ ಅವುಗಳ ರಚನಾವಿಧಾನವನ್ನು ಸರಿಯಾಗಿ ಗುರುತಿಸಿದ್ದಾರೆ. ಇಷ್ಟೇ ಅಲ್ಲದೆ, 'ಹಾಡಿದಾಗಲೇ ಈ ಗೀತೆಗಳು ಜೀವಂತವಾಗಬಲ್ಲವು' ಎಂಬ ಹೇಳಿಕೆಯಲ್ಲಿ ಕವಿಗಿಂತಲೂ ಗಾಯಕನ ಸಮರ್ಥನೆ ಎದ್ದು ಕಾಣುತ್ತದೆ. ಆದರೆ ಹಾಡಿಕೊಳ್ಳದೆ ಹಾಗೇ ಅವುಗಳ ಧಾಟಿಯಲ್ಲಿ ಓದಿಕೊಂಡಾಗಲೂ ಭಾವದ ಸೊಗಸನ್ನು ಸೂಸುವ ಪದ್ಯಗಳು ಇಲ್ಲಿ ಇರದೆ ಇಲ್ಲ. ಅಂಥವುಗಳನ್ನು ನಾನಿಲ್ಲಿ ಹೆಚ್ಚು ಆಸ್ಥೆಯಿಂದ ಗಮನಿಸಿದ್ದೇನೆ.

ಮುನ್ನುಡಿಯಲ್ಲಿ ಅ.ನ.ಕೃ. ಈ ಪದ್ಯಗಳನ್ನು ಭಕ್ತಿಗೀತೆಗಳು, ನಾಡಗೀತೆಗಳು, ಪ್ರಕೃತಿಗೀತೆಗಳು, ಜೀವನ ವಿಮರ್ಶೆ-ಎಂದು ನಾಲ್ಕುರಿಯಾಗಿ ವಿಂಗಡಿಸಿ ನಿರೂಪಿಸಿದ್ದಾರೆ. ಜೊತೆಗೆ ಕೆಲವು ವ್ಯಕ್ತಿಗಳ ಗುಣಗೌರವವನ್ನು ಕೀರ್ತಿಸುವ ಪದ್ಯಗಳೂ ದುಃಖಗೀತೆಗಳೂ ಈ ಸಂಗ್ರಹದಲ್ಲಿರುವುದನ್ನು ಅವರು ಎತ್ತಿ ಹೇಳಿದ್ದಾರೆ. ಈ ಎಲ್ಲ ಬಗೆಯ ಪದ್ಯಗಳಲ್ಲಿ ಕೆಲವೊಂದು ಭಕ್ತಿಗೀತೆಗಳು ಹಾಗೂ ಜೀವನವಿಮರ್ಶೆಯ ಪದ್ಯಗಳು ತಮ್ಮ ಕಾವ್ಯಗುಣದಿಂದ ನಮ್ಮ ಗಮನವನ್ನು ವಿಶೇಷವಾಗಿ ಸೆಳೆದುಕೊಳ್ಳುತ್ತವೆ. ವಚನ ಸಾಹಿತ್ಯ, ಶರಣರ ಅನುಭಾವ ಗೀತೆಗಳು ಹಾಗೂ ದಾಸರ ಪದಗಳ ಪ್ರಭಾವವನ್ನು ಕವಿ ಚೆನ್ನಾಗಿ ಅರಗಿಸಿಕೊಂಡಿದ್ದಾರೆ. ಕವಿಯ ಉದಾರವಾದ ಮನೋಧರ್ಮದಲ್ಲಿ, ಹೃದಯ ವೈಶಾಲ್ಯದಲ್ಲಿ ಇದು ಕಂಡುಬರುತ್ತದಲ್ಲದೆ, ಕೆಲವು ಸಲ ಹಿಂದಿನವರ ಉದಾತ್ತ ಭಾವವನ್ನು ತಮ್ಮ ದನಿಯಲ್ಲಿ ಮತ್ತೆ ನುಡಿಸಿ ತೋರಿಸುತ್ತಿದ್ದಾರೆಂದು ಅನಿಸಿದರೆ ಆಶ್ಚರ್ಯವಿಲ್ಲ. 'ಪರಶಿವೆ', 'ಶಿವ ನಿನ್ನ ಪಾದ', ' ಹರಲೀಲೆ', 'ರಘುರಾಮ', 'ಎಂತು ಬಣ್ಣಿಪೆ', ' ಮನದ ಮಂಗ', 'ಗೋಪಾಲ', 'ಹೇಯ-ಶ್ರೇಯ' - ಹೀಗೆ ಹಲವಾರು ಗೀತೆಗಳನ್ನು ಇಲ್ಲಿ ಹೆಸರಿಸುತ್ತ ಹೋಗಬಹುದು. ಈ ಬಗೆಯ ಸಾಧನೆಮಾಡುತ್ತಲೇ ಕವಿ ಅಲ್ಲಲ್ಲಿ ಸ್ವಂತಿಕೆಯನ್ನು ಮೆರೆಸಿರುವುದೂ ಉಂಟು. ಅಂಥ ಪದ್ಯಗಳೂ ಇಲ್ಲಿ ಸಾಕಷ್ಟು ಸಂಖ್ಯೆಯಲ್ಲಿರುವುದು ಗಮನಾರ್ಹವಾಗಿದೆ.

'ನಾನರಿಯೆ' ಪದ್ಯದ ಪಲ್ಲವಿ ರೂಢಿಯಂತಿದ್ದರೂ ಮುಂದಿನ ಮೂರು ನುಡಿಗಳಲ್ಲಿ ಆತ್ಮವಿಮರ್ಶೆ ಚೆನ್ನಾಗಿ ಅಭಿವ್ಯಕ್ತಗೊಂಡಿದೆ. ಹೊರಗಿರುವ ವೈರಿಗಳನ್ನು ಮರ್ದಿಸಿ ತನಗಿನ್ನು ಹಗೆಯಿಲ್ಲವೆಂದು ಗರ್ವದಿಂದ ನೆಗೆದಾಡುತ್ತಿರುವಾಗ, 'ಅರಿಯದಾದೆನುಯೆನ್ನೊಳಗಿರುವ ವೈರಿಗಳ'

ಎಂಬುದು ಹೊಳೆಯುತ್ತದೆ, ಎಲ್ಲ ಶಾಸ್ತ್ರಗಳನ್ನೋದಿ ಪಂಡಿತನಾಗಿ, ಐಶ್ವರ್ಯದ ಶಿಖರದಲ್ಲಿ ಕುಳಿತು ಜಗತ್ತಿನಲ್ಲಿ ನಡೆಯುವ ಆಟಗಳನ್ನು ಕಂಡರೂ 'ಒಳಗಾಗೊ ಆಟಗಳ ನಾನೋಡದಾದೆ'ಎಂದು ಅನಿಸುತ್ತದೆ. ಅದಕ್ಕಾಗಿ ಪಶ್ಚಾತ್ತಾಪವನ್ನು ವ್ಯಕ್ತಪಡಿಸುವ ಕೊನೆಯ ನುಡಿಯಲ್ಲಿಯ ಭಾವದ ತೀವ್ರತೆ ಮನಸ್ಸಿಗೆ ನಾಟುವಂತಿದೆ :

**ಇಂತಾದೆ ಅಂತಾದೆನೆಂದೆಷ್ಟು ನುಡಿಯಲಿ**
**ಎಂತಾದರಾಯಿತು ಅಪರಾಧಿಯಾದೆ**
**ಅಂತರಂಗದಿ ನೋಡುವಾ ದಿವ್ಯತತ್ವವನು**
**ಸಂತಸದಿ ಬೋಧಿಸುವ ಮನ್ನಿಸೊ ರಾಮೇಶ.**

ದುಡಿದು ಉಪವಾಸದಿಂದ ಬಳಲುವ ಬಡವರಿಗೆ ಮರುಗದ ತನ್ನ ಸ್ವಾರ್ಥವನ್ನು ಹಳಿದುಕೊಳ್ಳುತ್ತ,

**ಗಿಡಬಳ್ಳಿಗಿಂತ ಕಡೆಯಾದೆನಲ್ಲ**
**ಒಡಲಾಸೆಗಾಗಿ ಪರರ ವಂಚಿಸಿ ನಾನು**

ಎಂಬ 'ಒಡಲಾಸೆ'ಯಲ್ಲಿ ಆ ಭಾವ, ಗಿಡ-ಬಳ್ಳಿ-ಹೂಗಳ ಪ್ರತಿಮೆಯಲ್ಲಿ ಪರಿಪಾಕಗೊಳ್ಳುತ್ತದೆ. ದೇವರನ್ನು ಕಂಡೆವು, ನುಡಿಸಿದೆವು ಎಂದು ಹೇಳುವ ಜೋಳದ ನುಡಿ ನಿಜವೆ ? ಎಂಬ ಜಿಜ್ಞಾಸೆ 'ಎಲ್ಲಿರುವೆ ?' ಪದ್ಯದಲ್ಲಿ ಪರಿಣಾಮಕಾರಿಯಾಗಿ ಮೂಡಿದೆ :

**ರಾಮ ರಾಮಾ ಎಸಲು**
**ರಾಮಾಯಣದಾ ಮಾನವ**
**ರಾಮನೆದುರಾದನಲ್ಲದೆ**
**ನಾಮ ರೂಪರಹಿತ ಸ್ವಾಮಿ ನೀ ಕಾಣಲಿಲ್ಲ**

**ಶಿವ ಶಿವ ಶಿವಾ ಎನಲು**
**ಶಿವಭಸ್ಮಧರನಾಗಿ**
**ಶಿವಕಂಡನಲ್ಲದೆ**
**ಸರ್ವಾಂತರ್ಯಾಮಿಯಾದ ದೇವ ನಿನ್ನ ನೋಡಲಿಲ್ಲ.**

**ಕೃಷ್ಣ ಕೃಷ್ಣಾ ಎಸಲು**
**ವೇಣು ಗೋಪಿಯರೊಡನೆ**
**ಕೃಷ್ಣ ಮುಂದೆ ಬಂದು ನಿಂತ**
**ಘನ ಮಾಯಾತೀತ ನೀನೇನು ಬರಲಿಲ್ಲ.**

ಗುಣರೂಪನ ಕಂಡು ನೀನೆಂಬ ಭ್ರಾಂತಿಯೊ ? ಗುಣರಹಿತನ ನೋಡಿ ಧನ್ಯರಾದೆವು ಎಂಬರೊ? ಎಂಬ ಕೊನೆಯ ಪ್ರಶ್ನೆಯಲ್ಲಿ ದೇವರ ನಿಜವಾದ ಸ್ವರೂಪದ ಬಗ್ಗೆ ಉತ್ತರವೂ ದೊರೆಯುವಂತಿದೆ.

ಎಲ್ಲವು ಶಿವನೆಂದು 'ನಂಬಿದ ಮೇಲೆ' ಬೇರೆಲ್ಲಿಯೂ ಹೋಗಿ ಅವನನ್ನು ಅರಸುವ ಅಗತ್ಯವಿಲ್ಲ.

**ನರಲೋಕದಿ ಶಿವ ನೆಲಸಿದ್ದ ಮೇಲೆ**
**ಸ್ವರ್ಗದ ಸುಖದಾಸೆಯೇಕಯ್ಯ ಮನುಜ**

ಎಂದು ಕವಿ ಪ್ರಶ್ನಿಸುತ್ತಾನೆ. ಮನಸ್ಸಿನಲ್ಲಿ ನಿರಂತರ ಶಿವಧ್ಯಾನವಿದ್ದರೆ ಮುಕ್ತಿ ಪದವಿ ಎನ್ನುವುದು ಪ್ರತ್ಯೇಕ ಇಲ್ಲವೆಂಬ ಕವಿಯ ನಿಲುವು ಶರಣರ ನಿಲುವನ್ನೇ ಸಮರ್ಥಿಸುತ್ತದೆ.

ಜೀವನ ವಿಮರ್ಶೆಯನ್ನೊಳಗೊಂಡ ಪದ್ಯಗಳು ಬದುಕಿಗೆ ಹತ್ತಿರವಾಗಿ ಜೀವನದ ಬಗ್ಗೆ ಪ್ರೀತಿಯನ್ನು ಹುಟ್ಟಿಸುತ್ತವೆ. 'ಜೀವನದ ಸವಿ' ಆನಂದವೆಂಬುದನ್ನು ನಿರೂಪಿಸುವ ಪದ್ಯ ತಕ್ಕ ದೃಷ್ಟಾಂತಗಳಿಂದ 'ಕಗ್ಗ'ದ ಪದ್ಯಗಳಂತೆ ಜೀವನ ವಿವೇಕವನ್ನು ಸೊಗಸಾಗಿ ನಿರೂಪಿಸುತ್ತವೆ. ಮೀನ-ಮೇಷಗಳೆಣಿಸದೆ ಭಯವಳಿದು ಬದುಕಲು, ತಾನೂ ನಗುತ್ತ ಜಗವನ್ನೂ ನಗಿಸುತ್ತ, ಬಾಳಲು ಪ್ರೇರೇಪಿಸುತ್ತವೆ. ಆಗುವದು ನೀಗುವದು ಪ್ರಕೃತಿಯ ಧರ್ಮ. ಅದರ ಗೊಡವೆ ಬೇಡವೆನ್ನುತ್ತಾನೆ ಕವಿ :

**ಕೋಗಿಲೆಯ ಕೊರಳಲ್ಲಿ ಕುಸುಮವಂ ಅರಳಿಪೆಯ ?**
**ಆ ಕುಸುಮ ಸೌರಭದಿ ಸವಿದನಿಯ ನುಡಿಸುವೆಯ ?**
**ಬಾಗದೀ ಪ್ರಕೃತಿಯಂ ವಿಕೃತಿಯಿಂ ಸಾಧಿಪೆಯ ?**
**ಆಗದೀ ಗೊಡವೇಕೆ ? ಸಂತಸದಿ ನಡೆಮುಂದೆ.**

ಆತ್ಮೋಲ್ಲಾಸದಂತೆಯೇ ಆತ್ಮ ವಿಶ್ವಾಸವನ್ನು ಕುದುರಿಸುವ ಪದ್ಯಗಳೂ ಇಲ್ಲಿವೆ. 'ಯಾರ ಹಂಗೇಕೆ?' ಭಾವ-ಭಾಷೆ-ಛಂದ ಮುಪ್ಪುರಿಗೊಂಡ ಅಂಥ ಒಂದು ಯಶಸ್ವಿ ಪ್ರಯತ್ನ : ಒಂದು ನುಡಿಯನ್ನು ಉದಾಹರಿಸಬಹುದು :

**ದೃಷ್ಟವೇನದೃಷ್ಟವೇನೊ ಸೃಷ್ಟಿಯಿಟ್ಟ ಗುಟ್ಟದೇನೊ**
**ನಿಷ್ಠೆಯಿಂದಲಾತ್ಮವಾಣಿ ಎತ್ತಿ ಪಾಡುವೆ-ನಾ**
**ನಿತ್ಯ ಕುಣಿಯುವೆ.**

ಮಾಯಮೋಹವನೊಡ್ಡಿ ಕಾಡಿ ಓಡುವ ದೇವನ ಗೊಡವೆಗೆ ಹೋಗದೆ ತನ್ನ ಪಾಡನ್ನು ತಾನು ನೋಡಿಕೊಳ್ಳುವೆನೆಂಬ 'ನಾ ಕರೆಯಲಾರೆ' ಪದ್ಯದಲ್ಲಿಯೂ ಇದೇ ಭಾವದ ಕಸುವನ್ನು ಕಾಣಬಹುದು. 'ತಿಳಕೊಂಡೆ' ಪದ್ಯ ಶರೀಫರ ಹಾಡಿನ ಧಾಟಿಯನ್ನು ನೆನಪಿಗೆ ತರುತ್ತದೆ. 'ರಾಮೇಶ ಯಾತ್ರೆ'ಯಲ್ಲಿ ಕೊನೆಯಿಲ್ಲದ ಜೀವಯಾತ್ರೆಯನ್ನು ಸಮುಚಿತ ರೂಪಕದಲ್ಲಿ ಸೆರೆಹಿಡಿಯಲಾಗಿದೆ. 'ಬಾರೆ ಗೆಳತಿ ಪಯಣವಾಗು ಪೋಗಿ ಬರುವ ಯಾತ್ರೆಗೆ' ಎಂಬ ಪಲ್ಲವಿಯಿಂದ ಪ್ರಾರಂಭವಾಗುವ ಕವಿತೆಯ ನಡಿಗೆಯಲ್ಲಿಯೂ ಭಾವಾಭಿನಯ ವ್ಯಕ್ತಗೊಳ್ಳುವದನ್ನು ನೋಡಬಹುದು :

**ತಮ್ಮ ತಮ್ಮ ಬಾಳು ಬುತ್ತಿ**
**ತಲೆಯ ಮೇಲೆ ಪೊತ್ತು ಪೊತ್ತು**
**ತಿರುವು ಮುರುವು ದಾರಿಸುತ್ತಿ**
**ತೆರಳುತಿಹರು ಯಾತ್ರೆಗಾಗಿ.**

'ಕೋಗಿಲೆ' 'ಯುಗಾದಿ' ನಿಸರ್ಗದ ಅನುಸಂಧಾನದೊಂದಿಗೆ ಜೀವನೋತ್ಸಾಹವನ್ನು ಪ್ರತಿಬಿಂಬಿಸುವ

ಪದ್ಯಗಳು. 'ಮಾಯಾಪವನನುದ್ಧಟ'ತನಕ್ಕೆ ಸಂಕೇತವಾಗಿ 'ಬಿರುಗಾಳಿ' ತನ್ನ ಸಮಸ್ತ ಚೇತನದೊಂದಿಗೆ ರೂಪುಗೊಂಡಿದೆ. 'ನನ್ನ ಸಾವು'ದಲ್ಲಿಯ ವ್ಯಂಗ್ಯ 'ಮಾಯಾಕಾರ'ದ ಸಾಂಕೇತಿಕತೆ ಮೆಚ್ಚುವಂತಿವೆ. ಪೂಜಾರಿ ಕೈಯಲ್ಲಿ ಸಿಕ್ಕ ದೇವನ ಸ್ಥಿತಿಯನ್ನು 'ದೇವರ ಫಜೀತಿ' ಚೆನ್ನಾಗಿ ವಿಡಂಬಿಸುತ್ತದೆ -

ಅಂದಿನಿಂದಲಿ ನಿನ್ನ ಧ್ಯಾನಿಪ ಭಕ್ತರು
ಇಂದಾರ ಮೊರೆಹೊಕ್ಕು ಬಾಳಲುಬೇಕು
ಬಂಧಿಯಾದವನನ್ನೊ ? ಬಂಧಿಸಿದವನನ್ನೊ !
ಸಂದೇಹವಾಯ್ತೆಲೆ ನೀ ಸುಮ್ಮನಿರಲು.

ದೇಶವೇ ಸೆರೆಮನೆಯಾಗಿ ಬಂಧನದಲ್ಲಿದ್ದ ನಮಗೆ ಕೊನೆಗೂ ಸ್ವಾತಂತ್ರ್ಯ ಸಿಕ್ಕಿತು. ಆದರೆ ಪೂಜಾರಿಯ ಬಂಧನದಿಂದ ನಿನಗೆ ಬಿಡುಗಡೆ ದೊರೆಯುವದು ಸಾಧ್ಯವಿಲ್ಲ ಎಂಬ ಕವಿಯ ನುಡಿ ದೇವರ ಹೆಸರಿನಲ್ಲಿ ನಡೆಯುತ್ತಿರುವ ಶೋಷಣೆಯನ್ನು ವಿಡಂಬಿಸಿ ಚಿತ್ರಿಸಿದೆ. ಸಾಮಾಜಿಕ ಲೋಪದೋಷಗಳ ಚಿಂತನ 'ಲೇಸು' ಪದ್ಯದಲ್ಲಿ ಹೇಳಿಕೆಗಳಂತಿದ್ದರೂ ನೈತಿಕವಾಗಿ ಪರಿಣಾಮಕಾರಿಯಾಗಿವೆ :-

ಅಳುವವರ ನೋಡಿ ತಾ ಲೊಚಗುಟ್ಟಿ ಉಸ್ಸೆಂದು
ಅಯ್ಯಯ್ಯೊ ಪಾಪ ಇಂತಾಯಿತೇಕೆಂದು
ಅನುತಾಪ ನಟನೆಯ ಗೈದು ಪೋಪುದಕ್ಕಿಂತ
ಅವರಳಲಿಗನುವಾಗಿ ನೆರವಾಗುವುದು ಲೇಸು.

ಭಾಷಣಗಳಿಂದ ಬಡವನ ಕಿವಿತುಂಬಿಸಿದರೆ ಬಂತೇನು ? ಅವನ ಹೊಟ್ಟೆ ತುಂಬಿಸಬೇಕಲ್ಲವೆ?

ಬಡವರುದ್ಧಾರದಾ ಉದ್ದುದ್ದ ಮಾತಾಡಿ
ಕಡುಹಸಿದ ಬಡವರಾ ಕಿವಿ ತುಂಬುವುದಕ್ಕಿಂತ
ಕಡೆಗೊಂದು ದಿನ ಒಮ್ಮೆ ತಾನುಣ್ಣುವುದರಲ್ಲೆ
ಬಡವನೊಬ್ಬನಿಗೆ ತುತ್ತನ್ನವಿಡುವುದು ಲೇಸು.

ಮಳೆಯಿಲ್ಲದೆ ಇಳೆಯ ಸಂತಸವೆಲ್ಲ ಕಳೆದು ಕಳವಳಗೊಂಡ ಜನತೆಯ ಸ್ಥಿತಿ 'ಮಳೆರಾಯ'ದ ಆರ್ತತೆಯಲ್ಲಿ ಮೂರ್ತಿಗೊಂಡಿದೆ : 'ಮಳೆರಾಜ' ಎಂಬ ಜಾನಪದ ಗೀತದಷ್ಟೇ ಈ ಕವಿತೆಯೂ ಪ್ರಭಾವಶಾಲಿಯಾಗಿದೆ :

ಒಕ್ಕಲಿಗರು ನಿನ್ನ ಮಕ್ಕಳಲ್ಲವೇನೊ ?
ಮಕ್ಕಳ ಮೊರೆಕೇಳಿ ಬಾರದಿರುವರೇನೊ ?
ಕಕ್ಕಸವೇತಕೆ ಅಕ್ಕರದಲ್ಲಿ ಬಂದು
ದುಃಖವ ಬಿಡಿಸಯ್ಯ ಓ ಮಳೆರಾಯ.
ಬಾಯೆಂದು ಬೇಡುವ ಬಯಕೆಯು ನಮ್ಮದು
ಬಂದು ನೀಡುವ ದೊಡ್ಡತನ ನಿನ್ನದಯ್ಯ
ಬಲವಂತನು ನೀನು ಬಲಹೀನರು ನಾವು
ಬೇಗನೆ ಬಾರಯ್ಯ ಓ ಮಳೆರಾಯ.

